ಶ್ರೀಸುಯಮೀರಾಘವೇಂದ್ರ
ಪ್ರಕಾಶನ ಸಂಖ್ಯೆ - 21

ಶ್ರೀಸುಶೀಲೇಂದ್ರವಿಜಯಮಾಲಾ
ಸಂಖ್ಯೆ - 11




ಕಮಲೇಶ ಕುಸುಮ - 1

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಾ

# ಶ್ರೀರಾಮಚಾರಿತ್ರಮಂಜರೀ


ಅನುವಾದಕರು :

ಶ್ರೀರಾಘವೇಂದ್ರಗುರುವಂಶಭೂಷಣ, ವಿದ್ಯಾದಿರಾಜ, ವಿಧ್ಯಾವಾಚಸ್ಪತಿ,
ಸರಸ್ವತಿಕಂಠಾಭರಣಂ

**ರಾಜಾ ಶ್ರೀ. ಗುರುರಾಜಾಚಾರ್ಯ**



ಪ್ರಕಾಶಕರು :

ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು – ಬೆಂಗಳೂರು

**2010**

# ಸಂಸ್ಥೆಯ ಸಾಮ್ರಾಟ್ ಪೋಷಕರು




ಪೊಡವಿಗೊಡೆಯರಾದ ಶ್ರೀಗುರುರಾಯರನ್ನು ಹೃದಯಗುಡಿಯಲ್ಲಿ ಅಡಗಿಸಿ ಎಂದೂ ಮಾಸದ ಮೃದು ಮಧುರ ಮುಗ್ಧ ನಗೆಯನ್ನು ಹೊರಸೂಸುತ್ತ ತಮ್ಮ ಅಮೃತಹಸ್ತದ ಹಿಡಿಯಿಂದ ಮಂತ್ರಾಕ್ಷತೆಯನ್ನು ನೀಡುತ್ತಾ ತೇಡಿಬಂದು ಬೇಡಿದವರ ಇಷ್ಟಾರ್ಥಗಳನ್ನು ಇಡೇರಿಸುತ್ತಾ ಅನಂತ ಭಕ್ತಸಮೂಹದಿಂದ

**'ನಡೆದಾಡುವ ರಾಯರು'** ಎಂದು

ಪ್ರಾಥಃಸ್ಮರಣೀಯರಾಗಿ ಭಕ್ತಿ ಗೌರವದಿಂದ ಪೂಜಿಸಲ್ಪಡುತ್ತಿರುವ

**'ಶ್ರೀ ರಾಯರ ಕರುಣೆಯ ಕಂದರಾದ' ಪರಮಪೂಜ್ಯ**

**108 ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು.**

॥ ಶ್ರೀಮನ್ಮೂಲರಾಮೋ ವಿಜಯತೇ ॥

॥ ಶ್ರೀಗುರುರಾಜೋ ವಿಜಯತೇ ॥

# ಗ್ರಂಥಸಮರ್ಪಣೆ

ಭಾಷ್ಯಕಾರರಾಗಿ, ಟೀಕಾಕಾರರಾಗಿ, ಟಿಪ್ಪಣಿಕಾರರಾಗಿ,
ಶ್ರೀಮನ್ಮಧ್ವಸಿದ್ಧಾಂತವೆಂಬ ತತ್ತ್ವಜ್ಞಾನ ಕಲ್ಪವೃಕ್ಷವನ್ನು
ತಮ್ಮ ಅಪೂರ್ವ, ಅಸದೃಶ, ಶ್ರೇಷ್ಠ ಗ್ರಂಥಗಳಿಂದ
ಫಲಭರಿತವನ್ನಾಗಿಸಿ, ಆ ಪರಿಮಳಯುಕ್ತವಾದ
ಸತ್ಫಲದ ಸವಿಜೇನಿನ ತತ್ತ್ವಸುಧೆಯನ್ನು ವಸುಧೆಯೊಳು
ಸುಧೀಜನರು ಆಸ್ವಾದಿಸಿ ಆತ್ಮೋದ್ಧಾರದ ಅನುಭವವನ್ನು
ಹೊಂದಿ, ಆನಂದಿಸುವಂತೆ ಅನುಗ್ರಹಿಸಿ
ಆಶೀರ್ವದಿಸುತ್ತಿರುವ ಅತ್ಯಂತ ದಯಾಳುಗಳಾದ
ಜಗದ್ಗುರು ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ
ಇಪತ್ತೈದು ಶ್ರೇಷ್ಠಗ್ರಂಥಗಳಿಂದ ಸಮಲಂಕೃತವಾದ "ಶ್ರೀ ಗುರುರಾಜಸಂಪುಟಮ್"
ಎಂಬ ಪವಿತ್ರವಾದ ಗ್ರಂಥಪುಷ್ಪವನ್ನು
ಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ 75ನೇ ವರ್ಷದ
ವರ್ಧಂತ್ಯುತ್ಸವದ ಸವಿನೆನಪಿಗಾಗಿ ಹಾಗೂ
ಶ್ರೀಸುಯಮಿ ರಾಘವೇಂದ್ರ ಸಂಶೋಧನ ಕೇಂದ್ರದ
ಪಂಚಾದಶ ಸಂಸ್ಥಾಪನಾ ಮಹೋತ್ಸವದ ಸಂಸ್ಮರಣಾರ್ಥವಾಗಿ
ಶ್ರೀರಾಯರ ಪರಮಪಾವನ ಚರಣಕಮಲಗಳಲ್ಲಿ
ಪರಮಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ
ಅಮೃತಹಸ್ತಗಳಿಂದ ಸದ್ಭಕ್ತಿ-ಶ್ರದ್ಧಾದರ
ನಮನಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.



ಶ್ರೀಗುರುರಾಜರ ಚರಣಸೇವಕರು

ಪ್ರಕಾಶಕರು
ಶ್ರೀಸುಯಮೀ-ರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು-ಬೆಂಗಳೂರು

ದಿನಾಂಕ 23-09-2010
ಮಂತ್ರಾಲಯಂ

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು



ಸಾಮ್ರಾಟ್ ಪೋಷಕರು : ಶ್ರೀ ಸುಶಮೀಂದ್ರತೀರ್ಥರು ಹಾಗೂ
ಶ್ರೀ ಸುಯತೀಂದ್ರತೀರ್ಥರು

## ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು



ರಾಜಾ. ಶ್ರೀ. ವೇಣುಗೋಪಾಲಾಚಾರ್ಯ



ರಾಜಾ. ಶ್ರೀ. ಗುರುರಾಜಾಚಾರ್ಯ



ರಾಜಾ. ಶ್ರೀ. ಲಕ್ಷ್ಮೀನಾರಾಯಣಾಚಾರ್ಯ



ಡಾ. ಹುಲಿ. ಕೃ. ವೇದವ್ಯಾಸಾಚಾರ್ಯ

ಸಂಶೋಧನ ಕೇಂದ್ರದ ಸಂಸ್ಥಾಪಕರು

"ಶ್ರೀರಾಘವೇಂದ್ರಗುರುವಂಶಭೂಷಣಂ"

ರಾಜಾ. ಶ್ರೀ. ಗುರುರಾಜಾಚಾರ್ಯ



|| ಶ್ರೀಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||

ಶ್ರೀಹಂಸನಾಮಕ ಪರಮಾತ್ಮಪ್ರವರ್ತಿತ ಜ್ಞಾನಪೀಠಾಧ್ಯಕ್ಷರಾದ
ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ 108 ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರ
ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ 108 ಶ್ರೀಸುಶಮೀಂದ್ರತೀರ್ಥಶ್ರೀಪಾದಂಗಳವರ
ವರಕುಮಾರಕರಾದ

**ಪರಮಪೂಜ್ಯ ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ**

75 ನೇ ವರ್ಷದ ವರ್ಧಂತ್ಯುತ್ಸವದ ಸವಿನೆನಪಿಗಾಗಿ ಪ್ರಕಾಶಿಸಲ್ಪಟ್ಟ

# ಶ್ರೀಗುರುರಾಜರ ಗ್ರಂಥರತ್ನ

*|| ಜೀಯಾತ್ ಶ್ರೀಸುಯತೀಂದ್ರತೀರ್ಥಸಂಯಮಿಮಣೀ ವೇದಾಂತರಾಜ್ಯೇ ಚಿರಮ್ ||*

|| ಶ್ರೀಃ ||

|| ಶ್ರೀಮೂಲರಾಮೋ ವಿಜಯತೇತರಾಮ್ ||

|| ಶ್ರೀಗುರುರಾಜೋ ವಿಜಯತೇ ||

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಾ

# ಶ್ರೀರಾಮಚಾರಿತ್ರಮಂಜರೀ

**ವಿದ್ವಚ್ಚಕ್ರಚೂಡಾಮಣಿ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು**

ರಚಿಸಿದ ವ್ಯಾಖ್ಯಾನಸಹಿತ

ಕನ್ನಡಾನುವಾದ :

**ರಾಜಾ ಶ್ರೀ. ಗುರುರಾಜಾಚಾರ್ಯ**

**ಅನುವಾದಕರ ಮಂಗಳಾಚರಣೆ**

ಕೇಶವೀಶಾರ್ಚಿತಪದಃ ಜಗಜ್ಜನ್ಮಾದಿದೋಽಚ್ಯುತಃ ।
ಭವ್ಯಮವ್ಯಾಹತಂ ದದ್ಯಾತ್ ಕುಲಸ್ವಾಮೀ ರಮಾಪತಿಃ || 1 ||

ಅಜ್ಞಾನತಿಮಿರಧ್ವಂಸೀ ತತ್ವಸನ್ಮಾರ್ಗದೀಪಕಃ ।
ಸದ್ವೃಂದವಾರ್ಜವಿಸ್ತಾರೀ ಭಾಸತಾಂ ಮಧ್ವಭಾಸ್ಕರಃ || 2 ||

ರಾಮಪಾದಾಬ್ಜಲೋಲಂಬಂ ದುರ್ಮತಧ್ವಾಂತಭಾಸ್ಕರಮ್ ।
ಪಾವನಾಂಬೋಧಿರಾಕೇಂದುಂ ರಾಘವೇಂದ್ರಗುರುಂ ಭಜೇ || 3 ||

ರಾಘವೇಂದ್ರಕುಮಾರಾಯ ವಿದ್ವತ್ಕುಮುದಬಂಧವೇ ।
ಲಕ್ಷ್ಮೀನಾರಾಯಣಾರ್ಯಾಯ ನತಯಸ್ಸಂತು ಮಾಮಿಕಾಃ । || 4 ||

ಶ್ರೀರಾಘವೇಂದ್ರಸದ್ವಂಶ್ಯಾನ್ ಸುಯಮೀಂದ್ರಯತೀಶ್ವರಾನ್ ।
ನತ್ವಾ ಶ್ರೀಗುರುರಾಜಾಖ್ಯಃ ವ್ಯಾಖ್ಯಾಂ ಕುರ್ವೆ ಯಥಾಮತಿ || 5 ||

ಶ್ರೀರಾಘವೇಂದ್ರ ಗುರುಸಾರ್ವಭೌಮರ ಪೂರ್ವಾಶ್ರಮ (ಶ್ರೀ ವೀಣಾ ವೆಂಕಟನಾಥಾಚಾರ್ಯರವರ) ಪುತ್ರರಾದ, ಶ್ರೀಗುರುರಾಜರಲ್ಲಿಯೇ ಸಕಲಶಾಸ್ತ್ರಗಳನ್ನು ಅಭ್ಯಾಸಮಾಡಿ, ಸರ್ವಶಾಸ್ತ್ರಗಳಲ್ಲಿ ಅನುಪಮ ಪಾಂಡಿತ್ಯವನ್ನು ಸಂಪಾದಿಸಿದ, ಋಗ್ಭಾಷ್ಯಟೀಕಾವ್ಯಾಖ್ಯಾನಾದಿ ಅನೇಕ ಗ್ರಂಥರತ್ನಗಳನ್ನು ರಚಿಸಿದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ತಮ್ಮ

ಗುರುವರೇಣ್ಯರು ರಚಿಸಿದ ''ಶ್ರೀರಾಮಾಚಾರಿತ್ರಮಂಜರಿ''ಯ ಅಭಿಪ್ರಾಯವನ್ನು ಗುರುಮುಖದಿಂದ ಅರಿತು ಸಜ್ಜನರಿಗೆ ಅದನ್ನು ಸುಗಮವಾಗಿ ತಿಳಿಸಿಕೊಡಲು ತಾವು ವ್ಯಾಖ್ಯಾನ ಮಾಡಲು ಪ್ರವರ್ತಿಸಿ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿ-ಯಾಗುವುದಕ್ಕಾಗಿ ಗ್ರಂಥಪ್ರತಿಪಾದ್ಯ ದೇವತಾವಂದನರೂಪ ಮಂಗಳವನ್ನು ಮಾಡುತ್ತಾ ಶಿಷ್ಯಶಿಕ್ಷಾಕ್ಕೋಸ್ಕರವಾಗಿ ''ವಂದೇಽಹಂ'' ಎಂದು ನಿಬಂಧನ ಮಾಡುತ್ತಾರೆ.

### ವ್ಯಾಖ್ಯಾನಕಾರರ ಮಂಗಳಾಚರಣೆ

**ವಂದೇಽಹಂ ಜಾನಕೀಜಾನಿಂ ಜಗಜ್ಜನ್ಮಾದಿದಂ ವಿಭುಮ್ ।**
**ಜಗಚ್ಚೇಷ್ಟಕವಾಯ್ವಾದಿಪತಿಂ ಸರ್ವಜ್ಞಮಚ್ಯುತಮ್ ॥ 1 ॥**

**ಅರ್ಥ:** ಜಗಜ್ಜನ್ಮಾದಿದಂ- ಜಗತ್- ಚರಾಚರಾದಿ ಜಗತ್ತಿಗೆ, ಜನ್ಮಾದಿದಂ- ಜನ್ಮಾದಿಗಳನ್ನು ಕೊಡುವ, ಸೃಷ್ಟ್ಯಾ-ದ್ಯಷ್ಟಕರ್ತನಾದ, ಜಗಚ್ಚೇಷ್ಟಕವಾಯ್ವಾದಿಪತಿಂ- ಜಗತ್- ಜಗತ್ತಿಗೆ, ಚೇಷ್ಟಕ- ಪ್ರೇರಕರಾದ, ವಾಯು- ವಾಯುದೇವರೇ, ಆದಿ- ಮೊದಲಾದವರಿಗೆ, ಪತಿಂ- ಸ್ವಾಮಿಯಾದ, ಸರ್ವಜ್ಞಂ- ಸರ್ವಜ್ಞನಾದ, ವಿಭುಂ- ನಿಗ್ರಹಾನುಗ್ರಹಸಮರ್ಥ-ನಾದ, ಜಾನಕೀಜಾನಿಂ- ಸೀತಾಪತಿಯಾದ, ಅಚ್ಯುತಂ- ಚ್ಯುತಿರಹಿತನಾದ ಮತ್ತು ಭಕ್ತರ ಚ್ಯುತಿಯನ್ನು ಪರಿಹರಿಸತಕ್ಕ ಪರಮಾತ್ಮನನ್ನು, ಅಹಂ- ನಾನು, ವಂದೇ- ನಮಸ್ಕರಿಸುತ್ತೇನೆ.

ಇಲ್ಲಿ 'ಜಾನಕೀಜಾನಿಂ' ಎಂಬುವುದರಿಂದ ಈ ಗ್ರಂಥದಲ್ಲಿ ಶ್ರೀರಾಮದೇವರು ಅವತರಿಸಿ ಸೀತಾದೇವಿಯನ್ನು ವಿವಾಹಮಾಡಿಕೊಳ್ಳುತ್ತಾರೆಂಬ ಕಥೆಯೂ, 'ವಿಭುಂ' ಎಂಬುವುದರಿಂದ ತಾಟಕಾದಿ ರಾಕ್ಷಸರ ನಿಗ್ರಹ ಮತ್ತು ವಿಶ್ವಾ-ಮಿತ್ರಾದಿಗಳಲ್ಲಿ ಅನುಗ್ರಹಮಾಡಿದ ಕಥೆಯೂ, 'ಜಗಚ್ಚೇಷ್ಟಕವಾಯ್ವಾದಿಪತಿಂ' ಎಂಬುವುದರಿಂದ ಪ್ರಾಣನಾಯಕರಾದ ವಾಯುಪುತ್ರರಾದ ಹನುಮಂತದೇವರ ಭೇಟಿಯೂ, ಸುಗ್ರೀವಸಖ್ಯವೂ, ಅವರಿಬ್ಬರಲ್ಲಿ ಮಾಡಿದ ಅನುಗ್ರಹ ಮುಂತಾದ ಕಥೆಯೂ, 'ಅಚ್ಯುತಂ' ಎಂಬುವುದರಿಂದ ಯುದ್ಧದಲ್ಲಿ ಯಾವಾಗಲೂ ಅಪಜಯವಿಲ್ಲದೆ ರಾವಣಾದಿ ರಾಕ್ಷಸರನ್ನು ಸಂಹರಿಸಿ ಭಕ್ತರಾದ ವಿಭೀಷಣಾದಿಗಳನ್ನು ಚ್ಯುತಿರಹಿತರನ್ನಾಗಿ ಮಾಡಿದ ಕಥೆಯೂ, 'ಜಗಜ್ಜನ್ಮಾದಿದಂ' ಎಂಬುವುದರಿಂದ ಜನ್ಮಾಧಿಕರಣದಲ್ಲಿ ಉಕ್ತವಾದ ಪರಬ್ರಹ್ಮಲಕ್ಷಣವಿರುವುದರಿಂದ ಪರಬ್ರಹ್ಮನೇ ಶ್ರೀರಾಮಚಂದ್ರನು ಇತ್ಯಾದಿ ವಿಷಯಗಳು ಸೂಚಿತವಾಗುವುವು.

ಇಲ್ಲಿ ವಿಶೇಷಣ-ವಿಶೇಷ್ಯಗಳು ಸಾಭಿಪ್ರಾಯವಾದ ಕಾರಣ 'ಪರಿಕ್ರಿಯಾ' ಮತ್ತು 'ಪರಿಕ್ರಿಯಾಂಕುರ' ಅಲಂಕಾರ-ಗಳಿವೆ.

**ಲಕ್ಷಣ:** ಪರಿಕ್ರಿಯಾ ತದಂಕುರೌ ಸಾಕುತೌ ಧರ್ಮಧರ್ಮಿಣೌ ।
**ಉದಾ:** ಸುರೇಂದ್ರಸೂನೋಃ ಪುರತಃ ಕಃ ಸ್ಥಾತಾ ವಿಜಯೀಂದ್ರತೇ ॥ -ಅಲಂಕಾರಮಂಜರೀ

**ತಾತ್ಪರ್ಯ:** ಜಗತ್ಸೃಷ್ಟ್ಯಾದ್ಯಷ್ಟಕರ್ತನಾದ, ನಿಗ್ರಹಾನುಗ್ರಹಸಮರ್ಥನಾದ, ವಾಯುದೇವರೇ ಮೊದಲಾದ ದೇವತೆ-ಗಳಿಗೆ ನಿಯಾಮಕನಾದ, ಸರ್ವಜ್ಞನಾದ, ಶ್ರೀಸೀತಾಪತಿಯಾದ ಅಚ್ಯುತನಿಗೆ ನಮಸ್ಕಾರ ಮಾಡುತ್ತೇನೆ. ॥ 1 ॥

ಈಗ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು 'ಯಸ್ಯ ದೇವೇ ಪರಾ ಭಕ್ತಿಃ ಎಂಬ ಶ್ರುತ್ಯನುಸಾರವಾಗಿ ಶ್ರೀ ಪರಮಾತ್ಮನಂತೆ ಯೋಗ್ಯತಾನುಸಾರ ಗುರುವಂದನವೂ ಆವಶ್ಯಕವಾದುದರಿಂದ ಜಗದಾದಿಗುರುಗಳಾದ ಶ್ರೀಮುಖ್ಯ-ಪ್ರಾಣದೇವರ ನಮಸ್ಕಾರರೂಪವಾದ ಮಂಗಳವನ್ನು 'ಯೇನ ಪ್ರಕಾಶಿತಾ' ಎಂಬ ಪದ್ಯದಿಂದ ಮಾಡುತ್ತಾರೆ.

**ಯೇನ ಪ್ರಕಾಶಿತಾ ಮೂಲರಾಮಾಯಣಕಥಾ ಪರಾ ।**
**ತಂ ವಂದೇ ಶ್ರೀಹನೂಮಂತಂ ವೈರಾಗ್ಯಾದಿಗುಣಾರ್ಣವಮ್ ॥ 2 ॥**

**ಅರ್ಥ:** ಯೇನ - ಯಾವ ಹನುಮಂತ ದೇವರಿಂದ, ಪರಾ- ಉತ್ತಮವಾದ, ಮೂಲರಾಮಾಯಣಕಥಾ- ಮೂಲರಾಮಾಯಣಪ್ರತಿಪಾದ್ಯವಾದ ಕಥೆಯು, ಪ್ರಕಾಶಿತಾ- ಲೋಕಕ್ಕೆ ಪ್ರಕಟಿಸಲ್ಪಟ್ಟಿತೋ, ತಂ- ಅಂಥಾ, ವೈರಾಗ್ಯಾದಿ- ಗುಣಾರ್ಣವಂ- ವೈರಾಗ್ಯಾದಿ ಗುಣಗಳಿಂದ ಸಮುದ್ರಸದೃಶರಾದ, ಶ್ರೀಹನೂಮಂತಂ- ಬಳಿತ್ಥಾದಿ ವೇದಪ್ರತಿಪಾದ್ಯರಾದ, ಕಾಂತಿಸಂಪನ್ನರಾದ ಹನುಮಂತ ದೇವರನ್ನು, ವಂದೇ- ನಮಸ್ಕರಿಸುತ್ತೇನೆ.

ಇಲ್ಲಿಯೂ ಧರ್ಮ-ಧರ್ಮಿಗಳು ಅಭಿಪ್ರಾಯಗರ್ಭಿತವಾದ್ದರಿಂದ 'ಪರಿಕ್ರಿಯಾ, ಪರಿಕ್ರಿಯಾಂಕುರ'ಗಳೆಂಬ ಅಲಂಕಾರಗಳಿವೆ.

**ತಾತ್ಪರ್ಯ:** ಮೂಲರಾಮಾಯಣ ಕಥೆಯನ್ನು ಜಗತ್ತಿನಲ್ಲಿ ಪ್ರಕಾಶಪಡಿಸಿದ ವೈರಾಗ್ಯಾದಿ ಗುಣನಿಧಿಗಳಾದ, ಜ್ಞಾನಪೂರ್ಣರಾದ, ಬಳಿತ್ಥಾದಿ ವೇದಪ್ರತಿಪಾದ್ಯರಾದ ಶ್ರೀ ಹನುಮಂತ ದೇವರನ್ನು ನಮಸ್ಕರಿಸುತ್ತೇನೆ.

ಇದರಿಂದ ಈ ಕೃತಿಯಲ್ಲಿ ಮುಖ್ಯವಾಗಿ ಶ್ರೀರಾಮದೇವರ ಕಥೆಯೂ, ತದಂಗವಾಗಿ ಶ್ರೀ ವಾಯುದೇವರ ಮಹಾತ್ಮ್ಯವೂ ಪ್ರತಿಪಾದಿತವಾಗುತ್ತದೆಂದು ಸೂಚಿತವಾಗುವುದು. 'ವೈರಾಗ್ಯಾದಿಗುಣಾರ್ಣವಂ' ಎಂಬುವುದರಿಂದ 'ಪ್ರೇಷ್ಠೋ ನ ರಾಮಸ್ಯ ಬಭೂವ ತಸ್ಮಾತ್' ಎಂಬ ಶ್ರೀ ಸುಮಧ್ವವಿಜಯಶ್ಲೋಕಪ್ರತಿಪಾದ್ಯವಾದ ಮಹಾತ್ಮೆಯು ಸೂಚಿತ- ವಾಗುವುದು. 'ಶ್ರೀಹನೂಮಂತಂ' ಎಂಬುವುದರಿಂದ ಶ್ರೀ ಶಬ್ದವು ವೇದವಾಚಿಯಾದುದರಿಂದ ಹನುಮಂತ ದೇವರು 'ಬಳಿತ್ಥಾಸೂಕ್ತ', 'ಪವಮಾನಸೂಕ್ತ' ಮೊದಲಾದ ಶ್ರುತಿಗಳಿಂದ ಪ್ರತಿಪಾದ್ಯರು ಎಂಬುದು ಸೂಚಿತವಾಗುತ್ತದೆ. ॥ 2 ॥

ಈಗ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ಪೂರ್ವಾಶ್ರಮದಲ್ಲಿ ತಮಗೆ ತಾತಪಾದರಾದ (ತಂದೆಗಳಾದ) ಮತ್ತು ಮುಂದೆ ಶ್ರೀಮನ್ಮಧ್ವಾಚಾರ್ಯರವರ ವೇದಾಂತಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನದಲ್ಲಿ ಪಟ್ಟಾಭಿಷಿಕ್ತರಾಗಿ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರೆಂದು ಪ್ರಖ್ಯಾತರಾದಮೇಲೆ ತಮಗೆ ವಿದ್ಯಾಗುರುಗಳೂ, ಕುಲಗುರುಗಳೂ ಆದ, ಶ್ರೀಮಂತ್ರಾಲಯಪ್ರಭುವರೇಣ್ಯರ ವಂದನವು, ಅವರು ಜಗದ್ಗುರುಗಳಾದುದರಿಂದ ಅತ್ಯಾವಶ್ಯಕವೆಂಬುದನ್ನು ಸೂಚಿಸುತ್ತಾ 'ರಾಮಪಾದಾಂಬುಜಾಸಕ್ತಂ' ಎಂಬ ಪದ್ಯದಿಂದ ಮಂಗಳಮಾಡುತ್ತಾ ನಿಬಂಧನ ಮಾಡುತ್ತಾರೆ.

**ರಾಮಪಾದಾಂಬುಜಾಸಕ್ತಂ ರಾಮಾಂತಿಕಕಥಾರತಮ್ ।**
**ರಾಮದಾಸಪದಾಸಕ್ತಂ ರಾಘವೇಂದ್ರಗುರುಂ ಭಜೇ ॥ 3 ॥**

ಅರ್ಥ: ರಾಮಪಾದಾಂಬುಜಾಸಕ್ತಂ - ರಾಮ - ಶ್ರೀಮೂಲರಾಮಚಂದ್ರದೇವರ, ಪಾದಾಂಬುಜ- ಪಾದಕಮಲ- ಗಳಲ್ಲಿ, ಆಸಕ್ತಂ- ರತರಾದ, ರಾಮಾಂತಿಕಕಥಾರತಂ- ರಾಮಾಂತಿಕ- ರಾಮದೇವರ ಸಮೀಪದಲ್ಲಿ ಯಾವಾಗಲೂ ವಿರಾಜಮಾನಳಾದ ಶ್ರೀ ಸೀತಾದೇವಿಯ, ಕಥಾ- ಕಥೆಯಲ್ಲಿ ರತಂ- ಆಸಕ್ತರಾಗಿರತಕ್ಕ, ರಾಮದಾಸಪದಾಸಕ್ತಂ- ರಾಮ- ಶ್ರೀರಾಮದೇವರ, ದಾಸ- ಸೇವಕರಾದ ಶ್ರೀ ವಾಯುದೇವರ, ಪದ- ಪಾದಗಳಲ್ಲಿ, ಆಸಕ್ತಂ- ರತವಾದ, ರಾಘವೇಂದ್ರ- ಗುರುಂ- ಶ್ರೀರಾಘವೇಂದ್ರಗುರುಸಾರ್ವಭೌಮರನ್ನು, ಭಜೇ- ಸೇವಿಸುತ್ತೇನೆ.

ಇಲ್ಲಿ 'ಶ್ರೀರಾಘವೇಂದ್ರ' ಎಂಬ ಪದದಿಂದ ಶ್ರೀಗುರುಸಾರ್ವಭೌಮರು ಶ್ರೀಪ್ರಹ್ಲಾದರೆಂಬುದು ಸೂಚಿತ- ವಾಗುವುದು. ಹೇಗೆಂದರೆ, 'ಅಘಶ್ಚ ವೇಂ ಚ ಅಘವೇಂ, ಅಘವೇಂ ದ್ಯತಿ ರಾತೀತಿ ಅಘವೇಂದ್ರಃ, ರಾಜತೇ ಇತಿ ರಃ,

ರಕ್ಷಾಸೌ ಅಘವೇಂದ್ರಶ್ಚ ರಾಘವೇಂದ್ರಃ' ಎಂದು ವಿಗ್ರಹಮಾಡಿದರೆ, 'ಪಾಪವನ್ನು ಪರಿಹಾರಮಾಡಿ ಇಚ್ಛಿತ ಫಲವನ್ನು ಕೊಡತಕ್ಕವರು' ಎಂದು ಅರ್ಥವಾಗುವುದು. 'ಪ್ರಹ್ಲಾದ' ಶಬ್ದದಿಂದಲೂ ದುಃಖನಿವೃತ್ತಿಪೂರ್ವಕ ಆಹ್ಲಾದವನ್ನೀಯುವ ರೆಂಬ ಅರ್ಥವು ಬರುವುದರಿಂದ ಪ್ರಹ್ಲಾದರೇ ಶ್ರೀಗುರುರಾಜರೆಂದು ಸೂಚಿತವಾಗುವುದು. 'ರಾಮಪಾದಾಂಬುಜಾಸಕ್ತಂ' ಎಂಬುವುದರಿಂದ ಯಾವಾಗಲೂ ಶ್ರೀ ಮೂಲರಾಮಚಂದ್ರದೇವರ ಪಾದಪದ್ಮಗಳ ಸೇವಾನಿರತರೆಂದೂ ಆದ್ದರಿಂದಲೇ 'ಹರಿಪಾದಕಂಜನಿಷೇವಣಾಲ್ಲಬ್ಧ ಸಮಸ್ತ ಸಂಪತ್' ಎಂಬ ಗುರುಸ್ತೋತ್ರಾರ್ಥವು ಇದರಿಂದ ಸೂಚಿತವಾಗುವುದು. 'ರಾಮಾಂತಿಕ ಕಥಾರತಂ' ಎಂಬುವುದರಿಂದ ಸೀತಾದೇವಿಯು ಒಂದು ರೂಪದಿಂದ ಕೈಲಾಸಕ್ಕೆ ಹೋದರೂ ಮಂದಜನರ ದೃಷ್ಟಿಗೋಚರಳಾಗದೆ ಶ್ರೀರಾಮದೇವರ ಸಮೀಪದಲ್ಲಿ ಸತತವೂ ವಿರಾಜಮಾನಳಾಗಿದ್ದಳೆಂಬುದು ಸೂಚಿತವಾಗುವುದು ಮತ್ತು ಇದರಿಂದ ಈ ರಾಮಚಾರಿತ್ರಮಂಜರೀ ಕಥೆಯು ಸಂಗ್ರಹರಾಮಾಯಣೋಕ್ತಮೂಲಕ ಎಂಬುದು ವ್ಯಕ್ತವಾಗು–ವುದು. 'ರಾಮದಾಸಪದಾಸಕ್ತಂ' ಎಂಬುವುದರಿಂದ ಶ್ರೀ ವಾಯುದೇವರಲ್ಲಿ ಯಾವಾಗಲೂ ಭಕ್ತಿಯುಳ್ಳವರೆಂದೂ ಆದ್ದರಿಂದಲೇ "ಸಂಶ್ರದ್ಧೇಯಂ ವಾಯುಮತಂ ಸದೈವ" ಎಂದು ದೈತ್ಯಬಾಲಕರಿಗೆ ಉಪದೇಶಿಸಿದ ಶ್ರೀಪ್ರಹ್ಲಾದರಾಜರೇ ಇವರೆಂದೂ ಮತ್ತು ಭಾರತ ಯುದ್ಧದಲ್ಲಿ ಶ್ರೀ ಭೀಮಸೇನದೇವರನ್ನು ಸ್ತೋತ್ರಮಾಡಿದ ಬಾಹ್ಲೀಕರೇ ಇವರೆಂದೂ, 'ಹನುಮದ್ಭಾಷ್ಯಸೂಚಿತಮುಚ್ಯತೇ' ಎಂದು ಅಪ್ಪಣೆ ಕೊಡಿಸಿದ ಶ್ರೀ ಚಂದ್ರಿಕಾಚಾರ್ಯರೇ ಇವರೆಂತಲೂ ಸೂಚಿತ–ವಾಗುವುದು.

ಇಲ್ಲಿ ಹಿಂದಿನಂತೆಯೇ 'ಪರಿಕ್ರಿಯಾ' ಮತ್ತು 'ಪರಿಕ್ರಿಯಾಂಕುರ' ಅಲಂಕಾರಗಳೂ 'ಛೇಕಾಸುಪ್ರಾಸ' 'ವೃತ್ಯನುಪ್ರಾಸ' ಅಲಂಕಾರಗಳೂ ಇರುವುವು. **ಛೇಕಾನುಪ್ರಾಸಲಕ್ಷಣ:** 'ಛೇಕಾನುಪ್ರಾಸನಾಮಾಸೌ ದ್ವಿವ್ಯರ್ಂಜನಯುಗೋಕ್ತಿತಃ ।' **ದೃಷ್ಟಾಂತ:** 'ವಿಭಾತಿ ಭಾತಿ ಸೌಜನ್ಯಜನ್ಯಾಭುವಿ ಜಯೀಂದ್ರ ತೇ ॥ **ವೃತ್ಯನುಪ್ರಾಸಲಕ್ಷಣ:** ವೃತ್ಯನುಪ್ರಾಸ ಏಕಸ್ಯಾ–ಪ್ಯಾವೃತ್ತಿರಸಕೃದ್ಯದಿ । **ದೃಷ್ಟಾಂತ:** 'ವಿಜಯೀಂದ್ರೋ ವಿಲೋಲಾಕ್ಷಿವೀಕ್ಷಣಾಕ್ಷತಹೃತ್‌ಕ್ಷಿತೌ ॥'

**ತಾತ್ಪರ್ಯ:** ಶ್ರೀಮೂಲರಾಮಚಂದ್ರದೇವರ ಪಾದಕಮಲಾರ್ಚಕರಾದ, ಜಗನನ್ಮಾತೆಯಾದ ಶ್ರೀ ಸೀತಾದೇವಿಯರ ಕಥೆಯಲ್ಲಿ ಆಸಕ್ತರಾದ, ಶ್ರೀಸರ್ವಜ್ಞಾಚಾರ್ಯರ ಸೇವೆಯಲ್ಲಿ ನಿರತರಾದ ಶ್ರೀರಾಘವೇಂದ್ರಗುರುಸಾರ್ವಭೌಮರನ್ನು ಸೇವಿಸುತ್ತೇನೆ. ॥ 3 ॥

ಈಗ ಗ್ರಂಥ ಪ್ರಸಿದ್ಧಿಯಾಗುವುದಕ್ಕೋಸ್ಕರವಾಗಿ ಕರ್ತೃನಾಮವನ್ನು ನಿರ್ದೇಶಮಾಡುತ್ತಾ ವಿನಯಸೂಚಕವಾಗಿ 'ಲಕ್ಷ್ಮೀನಾರಾಯಣಾಖ್ಯೋಽಹಂ' ಎಂಬ ಪದ್ಯದಿಂದ ಪ್ರತಿಜ್ಞೆ ಮಾಡುತ್ತಾರೆ.

**ಲಕ್ಷ್ಮೀನಾರಾಯಣಾಖ್ಯೋಽಹಂ ಗುರುಪಾದಪ್ರಸಾದತಃ ।**
**ವಿವೃಣೋಮಿ ಯಥಾಬೋಧಂ ರಾಮಚಾರಿತ್ರಮಂಜರೀಮ್ ॥ 4 ॥**

**ಅರ್ಥ:** ಗುರುಪಾದಪ್ರಸಾದತಃ – ಶ್ರೀಗುರುರಾಜರ ಪಾದಾನುಗ್ರಹದಿಂದ, ಯಥಾಬೋಧಂ – ಶ್ರೀಗುರುರಾಜರ ಅಭಿಪ್ರಾಯಾನುಸಾರವಾಗಿ, ಯಥಾಬೋಧಂ– ನನ್ನ ಬುದ್ಧ್ಯನುಸಾರವಾಗಿ, ಲಕ್ಷ್ಮೀನಾರಾಯಣಾಖ್ಯಃ– ಲಕ್ಷ್ಮೀನಾರಾ–ಯಣನೆಂದು ಹೆಸರುಳ್ಳ, ಅಹಂ ನಾನು, ರಾಮಚಾರಿತ್ರಮಂಜರೀಂ– ರಾಮಚಾರಿತ್ರಮಂಜರೀ ಎಂಬ ಕಾವ್ಯವನ್ನು ವಿವೃಣೋಮಿ ವಿವರಣ ಮಾಡುತ್ತೇನೆ.

ಇಲ್ಲಿ 'ಗುರುಪಾದಪ್ರಸಾದತಃ' ಎಂಬುವುದರಿಂದ ಗುರುಗಳ ಅನುಗ್ರಹದಿಂದಲೇ ವ್ಯಾಖ್ಯಾನಮಾಡುತ್ತೇನೆಂಬ ವಿನಯ, ಗುರುಭಕ್ತಿಗಳು ಸೂಚಿತವಾಯಿತು. ನಾಮ ನಿರ್ದೇಶ ಮಾಡದಂತೆ ಗುರು ಎಂದು ಹೇಳಿರುವುದರಿಂದ

'ಗುರೋರ್ನಾಮ ನ ಗೃಣ್ಣೀಯಾಚ್ಚಿಷ್ಟಃ' ಎಂಬ ಪ್ರಮಾಣಾರ್ಥವು ಸೂಚಿತವಾಯಿತು. 'ಯಥಾಬೋಧಂ' ಎಂಬುವು- ದರಿಂದ ಗ್ರಂಥಕರ್ತರಾದ ಶ್ರೀಗುರುರಾಜರ ಅಭಿಪ್ರಾಯಾನುಸಾರವಾಗಿ ಅಧಿಕಾರಿಗಳಿಗೆ ಸುಗುಮವಾಗಿ ತಿಳಿಯುವಂತೆ ವ್ಯಾಖ್ಯಾನಮಾಡುತ್ತಾರೆಂಬುದು ಸೂಚಿತವಾಯಿತು.

ಇಲ್ಲಿಯೂ 'ಪರಿಕ್ರಿಯಾ' 'ಪರಿಕ್ರಿಯಾಂಕುರ' ಅಲಂಕಾರಗಳೂ ಶ್ಲೇಷಾಲಂಕಾರವೂ ಇದೆ. **ಶ್ಲೇಷಲಕ್ಷಣ** : ನಾನಾವಿಶೇಷಸಾಮಾನ್ಯಂ ಅರ್ಥಶ್ಲೇಷೋಽರ್ಥವರ್ಣನಮ್ । **ದೃಷ್ಟಾಂತ:** 'ಜಗತಃ ಪಾವನೀ ಸ್ವಃಸ್ಥಾ ಗಂಗಾತಿ ವಿಜಯೀಂದ್ರಗೀಃ ।' -ಅಲಂಕಾರಮಂಜರೀ

**ತಾತ್ಪರ್ಯ:** ಶ್ರೀಗುರುರಾಜರ ಅನುಗ್ರಹದಿಂದ ಲಕ್ಷ್ಮೀನಾರಾಯಣಾಚಾರ್ಯನಾದ ನಾನು ಶ್ರೀಗುರುರಾಜರ ಅಭಿಪ್ರಾಯಾನುಸಾರವಾಗಿ ಶ್ರೀರಾಮಚಾರಿತ್ರಮಂಜರಿಗೆ ವಿಶದವಾದ ವ್ಯಾಖ್ಯಾನವನ್ನು ಮಾಡುತ್ತೇನೆ ಎಂದು ಭಾವ. ॥ 4 ॥

## ಶ್ರೀರಾಮಚಾರಿತ್ರಮಂಜರೀ

ಈಗ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ಶ್ರೀರಾಮಚಾರಿತ್ರಮಂಜರೀ ಕಾವ್ಯಕ್ಕೆ ಪೀಠಿಕಾ ರಚನ ಮಾಡುತ್ತಾ 'ಇಹ ಖಲು' ಎಂದು ಆದ್ಯಪದ್ಯವನ್ನು ಅವತರಿಸುತ್ತಾರೆ.

**ಅವತಾರಿಕೆ:** ಜಗತ್ತಿನಲ್ಲಿ ಸಂಸಾರಕ್ಲೇಶದಿಂದ ಸಂತಪ್ತರಾದ, ಕಾರ್ಯಕರಣಾಶಕ್ತರಾದ ಸಜ್ಜನರುಗಳನ್ನು ಉದ್ಧರಿಸ- ಬೇಕೆಂದು ಇಚ್ಛಿಸುವ ಪರಮಕರುಣಾಳುಗಳಾದ ಶ್ರೀರಾಘವೇಂದ್ರ ಮುನಿವರ್ಯರು ಆ ಸಜ್ಜನರುಗಳ ನಿಖಿಲಕ್ಲೇಶಪರಿಹಾರ ಪೂರ್ವಕವಾಗಿ ಪರಮಾನಂದಾವಾಪ್ತಿಗಾಗಿ ಅದಕ್ಕೆ ಉಪಾಯಭೂತವಾದ ಸಂಗ್ರಹರಾಮಾಯಣದಲ್ಲಿ ಉಕ್ತವಾದ ಶ್ರೀರಾಮಕಥೆಯನ್ನು ''ಶ್ರೀಮಾನ್'' ಎಂಬ ಪದ್ಯದಿಂದ ಸಂಗ್ರಹವಾಗಿ ವರ್ಣನಮಾಡುತ್ತಾರೆ.

**ಶ್ರೀಮಾನಿತಿ ॥**

**ಶ್ರೀಮಾನ್ ಪೂರ್ವಂ ಪ್ರಜಾತೋ ದಶರಥನೃಪತೇ ರಾಮನಾಮಾಽಥ ನೀತೋ**
**ವಿಶ್ವಾಮಿತ್ರೇಣ ಮಂತ್ರಾಹೃದನುಜಸಹಿತಃ ತಾಟಕಾಂ ಘಾತಕೋಽಸ್ತ್ರಮ್ ।**
**ಬ್ರಹ್ಮಾದ್ಯಂ ಪ್ರಾಪ್ಯ ಹತ್ವಾ ನಿಶಿಚರನಿಕರಂ ಯಜ್ಞಪಾಲೋ ವಿಮೋಚ್ಯಾ-**
**ಹಲ್ಯಾಶಾಪಂ ಚ ಭಂಕ್ತ್ವಾ ಶಿವಧನುರುಪಯನ್ ಜಾನಕೀಂ ನಃ ಪ್ರಸೀದೇತ್ ॥ 1 ॥**

**ಅನ್ವಯಾರ್ಥ:** ಶ್ರೀಮಾನ್- ಜ್ಞಾನಾದಿಸಂಪತ್ತುಳ್ಳ, ಶ್ರೀಮಾನ್- ಲಕ್ಷ್ಮೀಸಹಿತನಾದ, ಪೂರ್ವಂ- ಹಿಂದೆ, ಯಃ- ಯಾವ ಶ್ರೀಮನ್ನಾರಾಯಣನು, ದಶರಥನೃಪತೇಃ- ದಶರಥನೆಂಬ ರಾಜನಿಂದ (ಕೌಸಲ್ಯಾದೇವಿಯಲ್ಲಿ), ರಾಮನಾಮಾ- ರಾಮನೆಂಬ ಹೆಸರುಳ್ಳವನಾಗಿ, ಪ್ರಜಾತಃ- ಅವತರಿಸಿದನೋ, ಅಥ- ಅವತಾರಾನಂತರ, ಅನುಜಸಹಿತಃ- ಅನುಜ ಲಕ್ಷ್ಮಣನಿಂದ, ಸಹಿತಃ ಕೂಡಿದವನಾಗಿ, ವಿಶ್ವಾಮಿತ್ರೇಣ- ವಿಶ್ವಾಮಿತ್ರರೆಂಬ ಋಷಿಯಿಂದ (ಯಜ್ಞರಕ್ಷಣಾರ್ಥವಾಗಿ ಸಿದ್ಧಾಶ್ರಮವನ್ನು ಕುರಿತು) ನೀತಃ- ಕರತರಲ್ಪಟ್ಟನೋ, ಮಂತ್ರಾಹೃತ್- ವಿಶ್ವಾಮಿತ್ರರಲ್ಲಿ ಅನುಗ್ರಹ ಮಾಡುವುದಕ್ಕಾಗಿ ಅವರು ಹೇಳಿದ ಮಂತ್ರವನ್ನು ಸ್ವೀಕರಿಸಿ, ತಾಟಕಾಂ- ತಾಟಕಿ ಎಂಬ ರಾಕ್ಷಸಿಯನ್ನು, ಘಾತಕಃ- ಸಂಹರಿಸಿ, ಬ್ರಹ್ಮಾದ್ಯಂ-

ಬ್ರಹ್ಮದೇವತಾಕವೇ ಮೊದಲಾದ, ಅಸ್ತ್ರಂ– ಅಸ್ತ್ರಗಳನ್ನು, ಪ್ರಾಪ್ಯ– ಪಡೆದು, ನಿಶಿಚರನಿಕರಂ– ನಿಶಿಚರ– ಸುಬಾಹು ಮೊದಲಾದ ರಾಕ್ಷಸರ, ನಿಕರಂ– ಸಮೂಹವನ್ನು, ಹತ್ವಾ– ಸಂಹರಿಸಿ, ಯಜ್ಞಪಾಲಃ– ಯಾಗವನ್ನು ರಕ್ಷಿಸುವವನಾಗಿ, ಅಹಲ್ಯಾಶಾಪಂ ಚ– ಗೌತಮಪತ್ನಿಯಾದ ಅಹಲ್ಯೆಯ ಶಾಪವನ್ನು ಸಹ, ವಿಮೋಚ್ಯ– ಪರಿಹರಿಸಿ, ಶಿವಧನುಃ– ರುದ್ರನ ಧನುಸ್ಸನ್ನು, ಭಂಕ್ತ್ವಾ– ಮುರಿದು, ಜಾನಕೀಂ– ಜನಕರಾಜನ ಪುತ್ರಿಯಾದ ಸೀತಾದೇವಿಯನ್ನು, ಉಪಯನ್– ಲಗ್ನಮಾಡಿಕೊಂಡನೋ, ಸಃ– ಅಂಥಾ ಶ್ರೀನಾರಾಯಣದೇವನು, ನಃ– ನಮಗೆ, ಪ್ರಸೀದೇತ್– ಪ್ರಸನ್ನನಾಗಲಿ.

ಶ್ರೀಗುರುಸಾರ್ವಭೌಮರ ಪೂರ್ವಾಶ್ರಮಪುತ್ರರಾದ ವಿದ್ವಚ್ಚಕ್ರಚೂಡಾಮಣಿಗಳಾದ ಶ್ರೀಲಕ್ಷ್ಮೀನಾರಾಯಣಾ-ಚಾರ್ಯರು, ಶ್ರೀಗುರುರಾಜರು ರಚಿಸಿದ ಶ್ರೀರಾಮಚಾರಿತ್ರಮಂಜರಿಗೆ ಸಂಸ್ಕೃತದಲ್ಲಿ ''ಶ್ರೀರಾಮಚಾರಿತ್ರಮಂಜರೀಮಾಲಾ'' ಎಂಬ ಶ್ರೇಷ್ಠ ವ್ಯಾಖ್ಯಾನವನ್ನು ರಚಿಸಿ ಅದರಲ್ಲಿ ಶ್ರೀಗುರುರಾಜರು ಒಂದೇ ಪದ್ಯದಲ್ಲಿ ಅಡಗಿಸಿರುವ ವಿಸ್ತಾರವಾದ ಶ್ರೀರಾಮನ ಕಥೆಯನ್ನು ''ಅನೇನ'' ಎಂದು ಆರಂಭಿಸಿ ''ಇತ್ಯಾದಿಕಥಾ ಸೂಚಿತಾ'' ಎಂದು ಬಹು ಹೃದಯಂಗಮವಾಗಿ ನಿರೂಪಿಸಿದ್ದಾರೆ. ಇಲ್ಲಿ ಶ್ರೀರಾಮಚಾರಿತ್ರಮಂಜರಿಯ ಒಂದೊಂದು ಶ್ಲೋಕಗಳಿಗೂ ಅವರು ಹೇಳಿರುವ ವಿಸ್ತಾರವಾದ ಕಥೆಯನ್ನು ಕಥಾಭಿಪ್ರಾಯ (ತಾತ್ಪರ್ಯ) ಎಂದು ಕೊಟ್ಟಿದ್ದೇವೆ.

**ಕಥಾಭಿಪ್ರಾಯ:** ಪೂರ್ವದಲ್ಲಿ ಕ್ಷೀರಸಮುದ್ರಶಾಯಿಯಾದ ಶ್ರೀಮನ್ನಾರಾಯಣನ ಸನ್ನಿಧಿಗೆ ಬ್ರಹ್ಮರುದ್ರಾದಿ ದೇವತೆಗಳು ಬಂದು ''ದೇವದೇವ ! ರಾವಣ–ಕುಂಭಕರ್ಣಾದಿ ರಾಕ್ಷಸರು ವರಬಲದಿಂದ ಮತ್ತರಾಗಿ ದೇವತೆಗಳನ್ನು ಪೀಡಿಸುತ್ತಿರುವರು. ಅವರು ಭೂಲೋಕದ ಸಜ್ಜನರಿಗೆ ತಾಪದಾಯಕರಾಗಿ ಲೋಕಕಂಟಕರಾಗಿ ಮೆರೆಯುತ್ತಿರುವರು. ಪ್ರಭು ! ಪರಾತ್ಪರನಾದ ನೀನು ಮಾನವನಾಗಿ ಅವತರಿಸಿ ದುಷ್ಟರಾದ ರಾವಣಾದಿ ರಾಕ್ಷಸರನ್ನು ಸಂಹಾರಮಾಡಿ ಜಗತ್ತಿಗೆ ಮಂಗಳವನ್ನುಂಟುಮಾಡಿ ಸಲಹಬೇಕು'' ಎಂದು ಪ್ರಾರ್ಥಿಸಿದರು.

ಚತುರಾನನಪ್ರಮುಖ ದಿವಿಜಾಂಗಣರ ಬಿನ್ನಹವನ್ನಾಲಿಸಿದ ಶ್ರೀರಮಾಧವನು , ನಗೆಮೊಗದಿಂದ ಅವರಿಗೆ ಅಭಯಪ್ರದಾನಮಾಡಿ ತಾನು ಅವತರಿಸುವುದಾಗಿಯೂ, ಸಮಸ್ತ ದೇವತೆಗಳೂ ವಾನರಾದಿ ರೂಪಗಳಿಂದ ಅವತರಿಸಿ ತನ್ನ ಬಲಕಾರ್ಯದಲ್ಲಿ ಸಹಾಯಕರಾಗಿದ್ದು ಸೇವೆ ಸಲ್ಲಿಸಬೇಕೆಂದೂ ಆಜ್ಞಾಪಿಸಿ ಅಂತರ್ಧಾನ ಹೊಂದಿದನು.

ಅನಂತರ ಭೂಲೋಕದಲ್ಲಿ ಪುತ್ರಾರ್ಥಿಯಾಗಿ ಪುತ್ರಕಾಮೇಷ್ಟಿಯನ್ನು ಆಚರಿಸಿದ ದಶರಥಚಕ್ರವರ್ತಿಯಲ್ಲಿ ಪ್ರಸನ್ನನಾದ ಶ್ರೀಹರಿಯು ದಶರಥಮಹಾರಾಜನಿಗೆ ಕೌಸಲ್ಯಾದೇವಿಯಲ್ಲಿ ಶ್ರೀರಾಮಚಂದ್ರನೆಂಬ ಅಭಿಧಾನದಿಂದ ಪುತ್ರನಾಗಿ ಅವತರಿಸಿದನು. ಅನಂತರ ಸುಮಿತ್ರಾದೇವಿಯಲ್ಲಿ ಲಕ್ಷ್ಮಣ–ಶತ್ರುಘ್ನರೂ; ಕೈಕೇಯಿದೇವಿಯಲ್ಲಿ ಭರತನೂ ಜನಿಸಿದರು. ದಶರಥನ ಪುತ್ರರಾದ ಈ ನಾಲ್ವರೂ ಅರಮನೆಯಲ್ಲಿ ಬೆಳೆದರು.

ಕೆಲವರ್ಷಗಳಾದಮೇಲೆ ಶ್ರೀರಾಮದೇವರು ಅವತರಿಸಿ ಅಭಿವೃದ್ಧರಾಗುತ್ತಿರುವ ವಿಚಾರವನ್ನು ತಿಳಿದ ವಿಶ್ವಾಮಿತ್ರ ಮಹರ್ಷಿಗಳು ದಶರಥಮಹಾರಾಜನ ಅರಮನೆಗೆ ಬಂದು, ತಾವು ಕೈಕೊಂಡಿರುವ ಯಜ್ಞವಿಚಾರವನ್ನು ಹೇಳಿ ಅದರ ರಕ್ಷಣೆಗಾಗಿ ಶ್ರೀರಾಮಚಂದ್ರನನ್ನು ಕಳುಹಿಸಿಕೊಡಬೇಕೆಂದು ಪ್ರಾರ್ಥಿಸಿದರು. ಶ್ರೀರಾಮಚಂದ್ರನು ತಂದೆಯ ಅಪ್ಪಣೆ-ಯನ್ನು ಪಡೆದು ಲಕ್ಷ್ಮಣಸಹಿತನಾಗಿ ವಿಶ್ವಾಮಿತ್ರರೊಡನೆ ಹೊರಟು ಮಾರ್ಗಮಧ್ಯದಲ್ಲಿ ವಿಶ್ವಾಮಿತ್ರರಲ್ಲಿ ಅನುಗ್ರಹ-ಮಾಡಬೇಕೆಂಬ ಕಾರುಣ್ಯದಿಂದ ಅವರು ಹೇಳಿದ ಕಾಮಿತಾರ್ಥಪ್ರದವಾದ ''ಬಲ–ಅತಿಬಲ'' ಎಂಬೆರಡು ಮಂತ್ರಗಳನ್ನು ಸ್ವೀಕರಿಸಿದವನಂತೆ ನಟಿಸಿ, ಸಿದ್ಧಾಶ್ರಮಸಮೀಪದಲ್ಲಿರುವ ಲೋಕಕಂಟಕಳಾದ ತಾಟಕಿಯೆಂಬ ರಾಕ್ಷಸಿಯನ್ನು ಸಂಹರಿಸಿ

ಸಿದ್ಧಾಶ್ರಮಕ್ಕೆ ಬಂದನು. ಅಲ್ಲಿ ಮತ್ತೆ ವಿಶ್ವಾಮಿತ್ರರು ಹೇಳಿದ ಮಂತ್ರಗಳನ್ನು ಸ್ವೀಕರಿಸಿ, ಯಾಗವನ್ನು ನಾಶಪಡಿಸಲು ಬಂದ ಬಲಿಷ್ಠರಾದ ಸುಬಾಹು ಮೊದಲಾದ ರಾಕ್ಷಸರನ್ನು ಸಂಹಾರಮಾಡಿ ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಿ, ಅದು ಯಶಸ್ವಿಯಾಗಿ ಪರಿಸಮಾಪ್ತವಾಗುವಂತೆ ಮಾಡಿ ಸರ್ವರಿಂದ ಸ್ತುತ್ಯನಾದನು.

ತರುವಾಯ ವಿದೇಹನಗರದಲ್ಲಿ ನಡೆಯಲಿರುವ ಶ್ರೀಸೀತಾಸ್ವಯಂವರ ವಿಚಾರವನ್ನು ವಿಶ್ವಾಮಿತ್ರರಿಂದ ಅರಿತು ಅವರೊಡನೆ ಲಕ್ಷ್ಮಣಸಹಿತನಾಗಿ ವಿದೇಹನಗರಕ್ಕೆ ಪ್ರಯಾಣ ಬೆಳೆಸಿದನು. ಮಾರ್ಗಮಧ್ಯದಲ್ಲಿ ಗೌತಮಮುನಿಗಳ ಶಾಪದಿಂದ ಶಿಲಾರೂಪಳಾಗಿದ್ದ ಅಹಲ್ಯಾದೇವಿಯನ್ನು ತನ್ನ ದರ್ಶನ ಮತ್ತು ಪಾದಸ್ಪರ್ಶಮಾತ್ರದಿಂದ ಶಾಪಮುಕ್ತಳನ್ನಾಗಿಸಿ, ಪರಮಪವಿತ್ರಳೂ ಸಾಧ್ವಿಯೂ ಆದ ಅಹಲ್ಯಾದೇವಿಯನ್ನು ಅವಳ ಪತಿಗಳಾದ ಗೌತಮ ಋಷಿಗಳೊಡನೆ ಸೇರಿಸಿ ಆ ಋಷಿದಂಪತಿಗಳು ನೀಡಿದ ಆತಿಥ್ಯ-ಪೂಜೆಗಳನ್ನು ಸ್ವೀಕರಿಸಿ ಮಿಥಿಲಾಪುರಕ್ಕೆ ಬಂದು ಅಲ್ಲಿ ಮಿಥಿಲಾಧಿಪತಿಯಾದ ಜನಕಮಹಾರಾಜನಿಂದ ಪೂಜಿತನಾದನು.

ಅನಂತರ ಜನಕ ಮಹಾರಾಜನು- ತಾನು ಹಿಂದೆ ಇಂದ್ರನನ್ನು ತಪಸ್ಸಿನಿಂದ ಸಂತೋಷಪಡಿಸಿ ಅವನಿಂದ ಹರನ ಧನುವನ್ನು ಪಡೆದು ಅದನ್ನು ಸೀತಾ-ಸ್ವಯಂವರ-ಪಣವಾಗಿಟ್ಟಿರುವ ವಿಚಾರವನ್ನು ರಾಮಚಂದ್ರನಿಗೆ ತಿಳುಹಿಸಿದನು. ರಾಮಚಂದ್ರಪ್ರಭುವು ವಿಶ್ವಾಮಿತ್ರರ ಆದೇಶದಂತೆ ಶಿವಧನುವನ್ನು ಲೀಲೆಯಿಂದಲೇ ಮೇಲೆತ್ತಿ ಹೆದೆಯೇರಿಸಿ ಗುಣ-ಸಂಧಾನಮಾಡುವ ನೆಪದಿಂದ ರುದ್ರಧನುವನ್ನು ಮುರಿದುಹಾಕಿದನು. ಆಗ ಪರಮಾನಂದಭರಿತಳಾದ ಲಕ್ಷ್ಮೀ-ಸ್ವರೂಪಿಣಿಯಾದ ಸೀತಾದೇವಿಯು ಶ್ರೀರಾಮಚಂದ್ರನ ಕೊರಳಿಗೆ ಮಾಲೆ ಹಾಕಿದಳು. ತರುವಾಯ ಜನಕರಾಜನ ಮೂಲಕ ಅಯೋಧ್ಯೆಯಲ್ಲಿದ್ದ ತಾಯಿ - ತಂದೆ - ಸಹೋದರರು - ಬಂಧು - ಬಾಂಧವರನ್ನು ಕರೆಯಿಸಿಕೊಂಡು ಅವರೆಲ್ಲರ ಸಮಕ್ಷ ಶ್ರೀರಾಮಚಂದ್ರನು ಪರಮವೈಭವದಿಂದ ಸೀತಾದೇವಿಯನ್ನು ವಿವಾಹಮಾಡಿಕೊಂಡನು - ಇತ್ಯಾದಿ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

ಇಂತು ಜಾನಕಿಯ ಕರಪಿಡಿದ ಶ್ರೀನಾರಾಯಣಾಭಿನ್ನರಾದ ಶ್ರೀರಾಮದೇವರು ನಮಗೆ ಪ್ರಸನ್ನರಾಗಲಿ ಎಂದು ಶ್ರೀಗುರುರಾಜರು ಪ್ರಾರ್ಥಿಸಿರುವರು.

**ವಿಗ್ರಹ:** ಶ್ರೀರಸ್ಯಾಸ್ತೀತಿ ಶ್ರೀಮಾನ್ ॥ ದಶರಥಾಖ್ಯಶ್ಚಾಸೌ ನೃಪತಿಶ್ಚ ದಶರಥನೃಪತಿಃ, ತಸ್ಮಾತ್-ದಶರಥನೃಪತೇಃ ॥ ರಾಮ ಇತಿ ನಾಮ ಯಸ್ಯ ಸಃ ರಾಮನಾಮಾ ॥ ಮಂತ್ರಾ ಆಹರತೀತಿ ಮಂತ್ರಾಹೃತ್ ॥ ಅನುಜೇನ ಸಹಿತಃ- ಅನುಜ-ಸಹಿತಃ ॥ ಬ್ರಹ್ಮ ಆದ್ಯಂ ಯಸ್ಯ ತತ್ ಬ್ರಹ್ಮಾದ್ಯಮ್ ॥ ನಿಶಿ ಚರಂತೀತಿ ನಿಶಿಚರಾಃ, ನಿಶಿಚರಾಣಾಂ ನಿಕರಃ- ನಿಶಿಚರನಿಕರಃ, ತಮ್ ॥ ಪಾಲಯತೀತಿ ಪಾಲಃ, ಯಜ್ಞಸ್ಯ ಪಾಲಃ- ಯಜ್ಞಪಾಲಃ, ಯಜ್ಞಂ ಪಾಲಯತೀತಿ ವಾ ॥ ಶಿವಸ್ಯ ಧನುಃ ಶಿವಧನುಃ ತತ್ ॥ ಜನಕಸ್ಯ ಅಪತ್ಯಂ ಸ್ತ್ರೀ ಜಾನಕೀ, ತಾಮ್ ॥

**ಅಲಂಕಾರಗಳು:** ಇಲ್ಲಿ 'ಉಲ್ಲೇಖ, ಉದಾತ್ತ, ಪರಿಕ್ರಿಯಾ, ಪರಿಕ್ರಿಯಾಂಕುರ' ಅಲಂಕಾರಗಳಿವೆ. **'ಉಲ್ಲೇಖ' ಲಕ್ಷಣ** - 'ಉಲ್ಲೇಖೋ ಬಹುಧೈಕೇನಾನೇಕೈರ್ವೋಲ್ಲೇಖನಂ ದ್ವಿಧಾ ।' **ದೃಷ್ಟಾಂತ** - 'ಗಿರಿರ್ಧೃತೋ ಗುರುರ್ವಾಚೀ ಜಯಿಂದ್ರೋ ಭಾತಿ ಭಾಸ್ಕರಃ ॥ ಅರ್ಥಿಪ್ರತ್ಯರ್ಥಿಶಿಷ್ಯಾಣಾಂ ಸ್ವರ್ದ್ರುಃ ಕಾಲಫಣೀಶ್ವರಃ ॥' **ಉದಾತ್ತಲಕ್ಷಣ** - 'ಉದಾತ್ತವೃದ್ಧಿ- ರ್ವೋದಾತ್ತಚರಿತಂ ವಾನ್ಯಬೋಧಕಮ್ । **ದೃಷ್ಟಾಂತ**- 'ರಾಜನ್ಯರಾಜಕೋಟೀರಮಣಿನೀರಾಜಿತೋ ಮುನಿಃ ॥' -ಅಲಂಕಾರಮಂಜರೀ ॥ 1 ॥

ಆಯನ್ ಇತಿ ॥

**ಆಯನ್ ರಾಮಃ ಸಭಾರ್ಯೋಽಧ್ವನಿ ನಿಜಸಹಜೈರ್ಭಾರ್ಗವೇಷ್ವಾಸರೋಪಾ-**
**ತ್ತದ್ಗಂ ಹತ್ವಾ ಸುರಾರಿಂ ಪುರಗ ಉತ ನುತಸ್ತಾಪಸೈರ್ಭೂಪಪೃಷ್ಟೈಃ ।**
**ಕಲ್ಯಾಣಾನಂತಧರ್ಮೋಽಗುಣಲವರಹಿತಃ ಪ್ರಾಣಿನಾಮಂತರಾತ್ಮೇ**
**ತ್ಯಾದ್ಯುಕ್ತಶ್ಚಾಭಿಷೇಕೇ ಪುರಜನಮಹಿತೋ ಮಹ್ಯತಾಂ ಮೇ ವಚೋಭಿಃ ॥ 2 ॥**

**ಅನ್ವಯಾರ್ಥ:** ಸಭಾರ್ಯಃ- ಪತ್ನಿಯಾದ ಸೀತಾದೇವಿಯೊಡನೆ, ನಿಜಸಹಜೈಃ- ನಿಜ- ಸ್ವಕೀಯರಾದ, ಸಹಜೈಃ- ಸಹೋದರರರಾದ ಲಕ್ಷ್ಮಣಾದಿಗಳೊಡನೆ, ರಾಮಃ- ಶ್ರೀರಾಮದೇವರು, ಆಯನ್- ಅಯೋಧ್ಯೆಯನ್ನು ಕುರಿತು ಹೊರಡ-ತಕ್ಕವನಾಗಿ, ಅಧ್ವನಿ- ಮಾರ್ಗದಲ್ಲಿ, ಭಾರ್ಗವೇಷ್ವಾಸರೋಪಾತ್- ಭಾರ್ಗವ- ಪರಶುರಾಮದೇವರ, ಇಷ್ವಾಸ- ಧನುಸ್ಸಿನ, ರೋಪಾತ್- ಪೂರಣಮಾಡುವುದರಿಂದ, ತದ್ಗಂ- ಪರಶುರಾಮದೇವರಲ್ಲಿರತಕ್ಕ, ಸುರಾರಿಂ- ಇಂದ್ರರಿಪುವಾದ ತಪೋಮಯನೆಂಬ ದೈತ್ಯನನ್ನು, ಹತ್ವಾ- ಸಂಹರಿಸಿ, ಪುರಗಃ- ಅಯೋಧ್ಯಾಪಟ್ಟಣವನ್ನು ಸೇರಿ, ಉತ- ಅನಂತರದಲ್ಲಿ, ಅಭಿಷೇಕೇ- ರಾಜ್ಯಾಭಿಷೇಕ ವಿಷಯದಲ್ಲಿ, ಭೂಪಪೃಷ್ಟೈಃ- ಭೂಪ-ದಶರಥರಾಜನಿಂದ, ಪೃಷ್ಟೈಃ- ರಾಮನ ಪಟ್ಟಾಭಿ-ಷೇಕವು ನಿಮಗೆ ಸಮ್ಮತವೇ ಎಂದು ಪ್ರಶ್ನಿಸಲ್ಪಟ್ಟ, ತಾಪಸೈಃ- ವಸಿಷ್ಠಾದಿಗಳಿಂದ, ಕಲ್ಯಾಣಾನಂತಧರ್ಮಃ- ಕಲ್ಯಾಣ- ಮಂಗಳಕರ- ವಾದ, ಅನಂತ- ಅಪರಿಮಿತವಾದ, ಧರ್ಮಃ- ಜ್ಞಾನಾದಿ ಗುಣಗಳುಳ್ಳ, ಅಗುಣಲವರಹಿತಃ- ಅಗುಣ- ದೋಷಗಳ, ಲವ-ಲೇಶದಿಂದ, ರಹಿತಃ- ದೂರನಾದ, ಪ್ರಾಣಿನಾಂ- ಸರ್ವ ಜೀವರುಗಳಿಗೂ, ಅಂತರಾತ್ಮಾ- ಅಂತ-ರ್ನಿಯಾಮಕನು, ಇತ್ಯಾದ್ಯುಕ್ತಃ - ಇವೇ ಮೊದಲಾಗಿ ಹೊಗಳಿಸಿಕೊಂಡು, ನುತಃ- ಸ್ತುತ್ಯನಾದ ಶ್ರೀರಾಮನು, ಮೇ- ನನ್ನ, ವಚೋಭಿಃ- ವಾಕ್ಯಗಳಿಂದ, ಮಹ್ಯತಾಂ- ಪೂಜಿತನಾಗಲಿ.

**ಕಥಾಭಿಪ್ರಾಯ:** ಸ್ವಯಂವರದ ಪಣವಾಗಿದ್ದ ಶಿವಧನುಸ್ಸನ್ನು ಮುರಿದು ಸಾಕ್ಷಾತ್ ಲಕ್ಷ್ಮೀಸ್ವರೂಪಿಣಿಯಾದ ಸೀತಾದೇವಿಯನ್ನು ವೈದಿಕ ವಿಧಿಪೂರ್ವಕವಾಗಿ ವಿವಾಹವಾದ ಶ್ರೀರಾಮಚಂದ್ರನು ತಾಯಿ-ತಂದೆ-ಸೀತಾದೇವಿ, ಲಕ್ಷ್ಮಣಾದಿ ಸಹೋದರರೊಡನೆ ಅಯೋಧ್ಯೆಗೆ ಪಯಣ ಬೆಳೆಸಿದನು. ಮಾರ್ಗ ಮಧ್ಯದಲ್ಲಿ ಅವರಿಗೆ ಶ್ರೀಪರಶು-ರಾಮದೇವರ ಭೇಟಿಯಾಯಿತು. ''ಶ್ರೀರಾಮಚಂದ್ರನು ಸಾಮಾನ್ಯ ಮಾನವನಲ್ಲ; ಸಾಕ್ಷಾನ್ನಾರಾಯಣಾವತಾರಿ'' ಎಂದು ಜನತೆಗೆ ದೃಢಪಡಿಸಲೆಂದು ಭಾರ್ಗವರಾಮರು ಶ್ರೀರಾಮನನ್ನು ನೋಡಿ ''ರಘುಕುಲಲಲಾಮ! ನೀನು ಶೈವಧನುವನ್ನು ಮುರಿದ ವಾರ್ತೆಯನ್ನಾಲಿಸಿ, ನಿನ್ನ ಶೌರ್ಯ-ಪ್ರತಾಪಗಳನ್ನು ಪರೀಕ್ಷಿಸಬಂದಿದ್ದೇನೆ. ಇಕೋ, ನೋಡು ನನ್ನ ಕರದಲ್ಲಿರುವ ಧನುವನ್ನು! ಇದು ಸಾಮಾನ್ಯ ಧನುಸ್ಸಲ್ಲ, ಇದು ವೈಷ್ಣವಧನುಸ್ಸು! ಇದನ್ನು ನಾರಾಯಣನೊಬ್ಬನಿಂದಲ್ಲದೆ ಮತ್ತಾರಿಂದಲೂ ಹೆದೆಯೇರಿಸಲಸದಳ! ಈಗ ಶೈವಧನುವನ್ನು ಮುರಿದ ಕೀರ್ತಿ ನಿನ್ನದಾಗಿದೆ. ರಾಮ! ನೀನೀ ಧನುವನ್ನು ಹೆದೆಯೇರಿಸಲು ಸಮರ್ಥನಾದಲ್ಲಿ ನೀನೇ ಸಾಕ್ಷಾತ್ ನಾರಾಯಣನು!'' ಎಂದು ಹೇಳಿ ಧನುವನ್ನು ಮುಂದೂಡಿದರು.

ಆಗ ಇಂದ್ರನೀಲಮಣಿಕಾಂತಿಯಿಂದೊಪ್ಪುವ ಶರೀರ ಸಿರಿಯಿಂದ ಬೆಳಗುವ ಶ್ರೀರಾಮಚಂದ್ರಪ್ರಭುವು ನಸುನಗುತ್ತಾ ಪರಶುರಾಮರಿತ್ತ ವೈಷ್ಣವಧನುವನ್ನು ಸ್ವೀಕರಿಸಿ ಲೀಲೆಯಿಂದಲೇ ಹೆದೆಯೇರಿಸಿ ಶರಸಂಧಾನ ಮಾಡಿ ''ಈ ಬಾಣಕ್ಕೆ ಗುರಿ ಯಾವುದು?'' ಎಂದೆನಲು, ಬ್ರಹ್ಮದೇವರ ವರ-ಬಲದಿಂದ ಪರಶುರಾಮರ ಹೃದಯದಲ್ಲಿ ಸೇರಿದ್ದ ''ತಪೋಮಯ''ನೆಂಬ ದೈತ್ಯನನ್ನು ಶ್ರೀಭಾರ್ಗವರಾಮರು ತಮ್ಮ ಹೃದಯದಿಂದ ಹೊರದೂಡಿ ''ಶ್ರೀರಾಮ! ನಿನ್ನ ಬಾಣಕ್ಕೆ ಇವನೇ ಗುರಿ''

ಎಂದೆನಲು ತಕ್ಷಣ ರಾಮಚಂದ್ರದೇವನು ತಪೋಮಯನೆಂಬ ದೈತ್ಯನಮೇಲೆ ಬಾಣವನ್ನು ಪ್ರಯೋಗಿಸಿ ಅವನನ್ನು ಸಂಹರಿಸಿದನು. ಆಗ ಶ್ರೀ ಪರಶುರಾಮರು, ಶ್ರೀರಾಮ ಮತ್ತು ತಾವು ಒಬ್ಬ ಶ್ರೀವಿಷ್ಣುವಿನ ಎರಡು ರೂಪಗಳೆಂಬುದನ್ನು ತೋರಿಸಿ, ಮುಂದೆ ರಾಕ್ಷಸಕುಲದಮನಕ್ಕೆ ಈ ಧನುವು ಸಹಾಯಕವಾಗಲೆಂದು ಅದನ್ನು ರಾಮದೇವರಿಗೇ ನೀಡಿ ಅವನಿಂದ ಬೀಳ್ಕೊಂಡು ತೆರಳಿದರು. ಶ್ರೀರಾಮದೇವನ ಅದ್ಭುತ ಪರಾಕ್ರಮವನ್ನು ಕಂಡು ಪರಮಾನಂದಭರಿತರಾದ ಬಂಧುಬಾಂಧವರು ಅವನನ್ನು ಬಹುವಾಗಿ ಸ್ತುತಿಸಿದರು. ಅನಂತರ ಸಕಲರೊಡನೆ ರಾಮನು ಅಯೋಧ್ಯಾ ಪಟ್ಟಣಕ್ಕೆ ದಯಮಾಡಿಸಿದನು.

ಶ್ರೀ ಸೀತೆಯ ಕರಪಿಡಿದು ನಗರಕ್ಕಾಗಮಿಸಿದ ರಘುಕುಲವರ್ಧನ ಶ್ರೀರಾಮಪ್ರಭುವನ್ನು ಪುರಜನರು ಪರಮಾದರ ಪ್ರೇಮಗಳಿಂದ ಸ್ವಾಗತಿಸಿದರು. ಅನಂತರ ದಶರಥಮಹಾರಾಜನು ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕ ಮಾಡಬಯಸಿ ಆ ವಿಚಾರವಾಗಿ ವಸಿಷ್ಠಾದಿ ಋಷಿಗಳು ಮತ್ತು ಮಂತ್ರಿಮಂಡಲದವರಲ್ಲಿ ವಿಚಾರವಿನಿಮಯ ಮಾಡಿದನು. ದಶರಥ ಮಹಾರಾಜನ ಅಭಿಪ್ರಾಯವನ್ನು ಕೇಳಿ ಮುದಗೊಂಡ ವಸಿಷ್ಠಾದಿ ಮುನಿಜನರು "ಶ್ರೀರಾಮಚಂದ್ರನು ಕಲ್ಯಾಣಾನಂತ ಗುಣಪೂರ್ಣನು, ನಿರ್ದೋಷನು, ಸಕಲ ಜೀವರಲ್ಲಿ ಅಂತರ್ಗತನು. ಇಂಥ ಪರಮಮಂಗಳಮೂರ್ತಿಯಾದ ಜಾನಕೀನಾಥನಿಗೆ ಪಟ್ಟಾಭಿಷೇಕ ಮಾಡುವುದು ಸರ್ವರ ಶುಭೋದಯಕ್ಕೆ ಕಾರಣ" ಮುಂತಾಗಿ ಶ್ರೀರಾಮನನ್ನು ಹೊಗಳಿ ಅವನ ರಾಜ್ಯಾಭಿಷೇಕಕ್ಕೆ ತಮ್ಮೆಲ್ಲರ ಆನಂದವನ್ನು ವ್ಯಕ್ತಪಡಿಸಿದರು. ಅಯೋಧ್ಯೆಯ ಪೌರಜಾನಪದರು ಶ್ರೀರಾಮ-ಚಂದ್ರನನ್ನು ಪರಿಪರಿಯಾಗಿ ಪೂಜಿಸಿ ಸಂತಸಗೊಂಡರು-ಇತ್ಯಾದಿ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

ಇಂತು ವಸಿಷ್ಠಾದಿಗಳಿಂದ ಸ್ತುತ್ಯನಾಗಿ ಪುರಜನರಿಂದ ಪೂಜಿತನಾದ ಶ್ರೀರಾಮಪ್ರಭುವು ನನ್ನ ಈ ವಾಕ್ಯಗಳಿಂದ ಪ್ರೀತನಾಗಲಿ ಎಂದು ಶ್ರೀಗುರುಸಾರ್ವಭೌಮರು ಪ್ರಾರ್ಥಿಸಿದ್ದಾರೆ.

**ವಿಗ್ರಹ:** ರಮಂತೇ ಯೋಗಿನಃ ಅಸ್ಮಿನ್ನಿತಿ ರಾಮಃ । ಭಾರ್ಯಯಾ ಸಹಿತಃ ಸಭಾರ್ಯಃ । ನಿಜಾಶ್ಚ ತೇ ಸಹಜಾಶ್ಚ ನಿಜಸಹಜಾಃ, ತೈಃ । ಭೃಗೋರಪತ್ಯಂ ಪುಮಾನ್ ಭಾರ್ಗವಃ, ಭಾರ್ಗವಸ್ಯ ಇಷ್ವಾಸಃ ಭಾರ್ಗವೇಷ್ವಾಸಃ, ತಸ್ಯ ರೋಪಃ, ತಸ್ಮಾತ್ । ತಸ್ಮಿನ್ ಗಚ್ಛತೀತಿ ತದ್ಗಃ, ತಮ್ । ಸುರಸ್ಯ ಅರಿಃ ಸುರಾರಿಃ ತಮ್ । ಪುರಂ ಗಚ್ಛತೀತಿ ಪುರಗಃ । ಭೂಪೇನ ಪೃಷ್ಟಾಃ, ಭೂಪಪೃಷ್ಟಾಃ, ತೈಃ । ಕಲ್ಯಾಣಾಃ ಅನಂತಾಃ ಧರ್ಮಾಃ ಯಸ್ಯ ಸಃ ಕಲ್ಯಾಣಾನಂತಧರ್ಮಾಃ । ನ ಗುಣಾಃ ಅಗುಣಾಃ, ಅಗುಣಾನಾಂ ಲವಃ, ಅಗುಣಲವಃ, ತೇನ ರಹಿತಃ, ಅಗುಣಲವರಹಿತಃ । ಪ್ರಾಣ ಏಷಾಮಸ್ತೀತಿ ಪ್ರಾಣಿನಃ, ತೇಷಾಂ ಪ್ರಾಣಿನಾಮ್ । ಅಂತಃ ಆತ್ಮಾ ಅಂತರಾತ್ಮಾ । ಪುರೇ ವಿದ್ಯಮಾನಾಶ್ಚ ತೇ ಜನಾಶ್ಚ ಪುರಜನಾಃ, ತೈಃ ಮಹಿತಃ, ಪುರಜನ-ಮಹಿತಃ ॥

**ಅಲಂಕಾರಗಳು:** ಇಲ್ಲಿ 'ಸಹೋಕ್ತಿ', 'ಕಾವ್ಯಲಿಂಗ', 'ಉದಾತ್ತ' 'ಉಲ್ಲೇಖ' ಇತ್ಯಾದಿ ಅಲಂಕಾರಗಳಿವೆ.

'ಸಹೋಕ್ತಿ' ಲಕ್ಷಣ, ದೃಷ್ಟಾಂತ, "ಸಹೋಕ್ತಿಸ್ಸೈವ ಸತ್ಯಸ್ಯಕ್ ಧರ್ಮಃ ಕೀರ್ತ್ಯಾ ಜಯೀಂದ್ರತೇ" ।

–ಅಲಂಕಾರಮಂಜರೀ

**ಕಾವ್ಯಲಿಂಗಲಕ್ಷಣ:** "ಕಾವ್ಯಲಿಂಗಂ ಸಮರ್ಥ್ಯಾರ್ಥಸಮರ್ಥನ ಮುದೀರ್ಯತೇ ।"

**ದೃಷ್ಟಾಂತ:** ಜಯಿಂದ್ರೋ ಯದಯಂ ಸ್ಪರ್ಧಾಮದ್ಧಾ ತ್ಯಜತ ಪಂಡಿತಾಃ ।" ॥ 2 ॥

**ಕೈಕೇಯೀತಿ ॥**

> **ಕೈಕೇಯೀಪ್ರೀತಿಹೇತೋಸ್ಸಸಹಜನೃಪಜೋ ವಲ್ಕಲೀ ಯಾನ್ನರಣ್ಯಂ**
> **ಗಂಗಾತಾರೀ ಗುಹಾರ್ಚ್ಯಃ ಕೃತರುಚಿರಜಟೋ ಗೀಷ್ಪತೇಃ ಪುತ್ರಮಾನ್ಯಃ ।**
> **ತೀರ್ತ್ವಾ ಕೃಷ್ಣಾಂ ಪ್ರಯಾತೋಽವತು ನಿಜಮಮಲಂ ಚಿತ್ರಕೂಟಂ ಪ್ರಪನ್ನಂ**
> **ಸ್ವಾಂಬಾಭಿರ್ಭ್ರಾತರಂ ತಂ ಶ್ರುತಜನಕಗತಿಸ್ಸಾಂತ್ವಯನ್ವ್ಯುಪ್ತತೀರ್ಥಃ ॥ 3 ॥**

**ಅನ್ವಯಾರ್ಥ:** ಕೈಕೇಯೀಪ್ರೀತಿರ್ಹೇತೋ: – ಕೈಕೇಯೀ – ಕೈಕೇಯೀ ದೇವಿಯ, ಪ್ರೀತಿಹೇತೋಃ – ಪ್ರೀತಿ-ಗೋಸ್ಕರವಾಗಿ, ಸಹಜನೃಪಜಃ – ಲಕ್ಷ್ಮಣಸೀತೆಯರೊಡನೆ, ರಾಮಃ – ಶ್ರೀರಾಮದೇವರು, ವಲ್ಕಲೀ – ನಾರುವಸ್ತ್ರ-ವನ್ನುಟ್ಟು ಅರಣ್ಯಂ– ವನಕ್ಕೆ, ಯಾನ್– ಹೋಗತಕ್ಕವರಾಗಿ, ಗಂಗಾತಾರೀ– ಗಂಗೆಯನ್ನು ದಾಟಿದವರಾಗಿ, ಗುಹಾರ್ಚ್ಯಃ – ಗುಹ – ಗುಹನೆಂಬ ಅಂಬಿಗನಿಂದ, ಅರ್ಚ್ಯಃ – ಪೂಜಿತರಾಗಿ, ಕೃತರುಚಿರಜಟಃ – ಮನೋಹರವಾದ ಜಟೆಯನ್ನು ಧರಿಸಿ, ಗೀಷ್ಪತೇಃ – ಬೃಹಸ್ಪತ್ಯಾಚಾರ್ಯರ, ಪುತ್ರಃ – ಮಕ್ಕಳಾದ ಭರದ್ವಾಜರಿಂದ, ಮಾನ್ಯಃ – ಪೂಜಿತರಾಗಿ, ಕೃಷ್ಣಾಂ – ಯಮುನಾನದಿಯನ್ನು, ತೀರ್ತ್ವಾ– ದಾಟಿ, ನಿಜಂ – ಸ್ವಕೀಯವಾದ, ಅಮಲಂ – ನಿರ್ಮಲವಾದ, ಚಿತ್ರಕೂಟಂ – ಚಿತ್ರಕೂಟವೆಂಬ ಪರ್ವತವನ್ನು, ಪ್ರಯಾತಃ – ಸೇರಿ, ಸ್ವಾಂಬಾಭಿಃ – ತಮ್ಮ ತಾಯಿಯಾದ ಕೌಸಲ್ಯಾದೇವಿ ಮೊದಲಾ-ದವರಿಂದ ಕೂಡಿ, ತಂ– ಚಿತ್ರಕೂಟಪರ್ವತವನ್ನು, ಪ್ರಪನ್ನಂ– ಹೊಂದಿದಂಥಾ, ಅಥವಾ ತಂ– ರಾಮದೇವರನ್ನು, ಪ್ರಪನ್ನಂ – ಶರಣುಹೊಂದಿದಂಥಾ, ನಿಜ– ಸ್ವಕೀಯನಾದ, ಅಮಲಂ– ನಿರ್ಮಲವಾದ, ಭ್ರಾತರಂ – ತಮ್ಮನಾದ ಭರತನನ್ನು, ಸಾಂತ್ವಯನ್– ಸಮಾಧಾನಪಡಿಸಿ, ಶ್ರುತಜನಕಗತಿಃ – ತಂದೆಯ ಮರಣವಾರ್ತೆಯನ್ನು ಕೇಳಿ, ವ್ಯುಪ್ತತೀರ್ಥಃ– ತಂದೆಯ ಉದ್ದಿಶ್ಯದಿಂದ ತರ್ಪಣವನ್ನಿತ್ತಂಥಾ ಶ್ರೀರಾಮದೇವರು, ಮಾಂ –ನನ್ನನ್ನು, ಅವತು –ರಕ್ಷಿಸಲಿ.

**ಕಥಾಭಿಪ್ರಾಯ:** ದಶರಥಚಕ್ರವರ್ತಿಯು ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಲು ನಿಶ್ಚಯಿಸಿರುವ ವಿಚಾರವನ್ನು ತಿಳಿದ ಕೈಕೇಯಿದೇವಿಯ ಅಂತರಂಗದಾಸಿಯಾದ ಮಂಥರೆಯು ಅದನ್ನು ಸಹಿಸದೆ ಕೈಕೇಯಿದೇವಿಗೆ ದುರ್ಬೋಧನೆ ಮಾಡಿ, ಹಿಂದೆ ದಶರಥ ಮಹಾರಾಜನು ದೇವಾಸುರ ಯುದ್ಧಕಾಲದಲ್ಲಿ ಕೈಕೆಯೀದೇವಿಗೆ ಕೊಟ್ಟಿದ್ದ ಎರಡು ವರಗಳನ್ನು ಈ ಸಂದರ್ಭದಲ್ಲಿ ಕೇಳಿ ಭರತನಿಗೆ ರಾಜ್ಯವು ದೊರೆಯುವಂತೆ ಮಾಡಲು ಪ್ರೋತ್ಸಾಹಿಸಿದಳು. ಮಂಥರೆಯಿಂದ ಪ್ರೇರಿತಳಾದ ಕೈಕೇಯಿದೇವಿಯು ಪತಿಯಲ್ಲಿ ಒಂದು ವರದಿಂದ ಶ್ರೀರಾಮನಿಗೆ ಹದಿನಾಲ್ಕು ವರ್ಷ ವನವಾಸ, ಮತ್ತೊಂದು ವರದಿಂದ ಭರತನಿಗೆ ರಾಜ್ಯಾಭಿಷೇಕವನ್ನು ಅಪೇಕ್ಷಿಸಿದಳು. ಇದರಿಂದ ಶ್ರೀರಾಮನ ಪಟ್ಟಾಭಿಷೇಕಕ್ಕೆ ಅಡ್ಡಿಯುಂಟಾಯಿತು.

ಈ ವಿಚಾರವನ್ನು ತಿಳಿದ ಶ್ರೀರಾಮನು ಪಿತೃವಾಕ್ಯಪರಿಪಾಲನೆಗಾಗಿಯೂ, ರಾವಣಾದಿ ರಾಕ್ಷಸರ ಸಂಹಾರರೂಪವಾದ ದೇವತೆಗಳ ಕಾರ್ಯವನ್ನು ನೆರವೇರಿಸಲೂ ಸಹ ಸಂತೋಷದಿಂದ ಭರತನಿಗೆ ರಾಜ್ಯಾಭಿಷೇಕ ಮಾಡಲು ಹೇಳಿ ವನವಾಸಕ್ಕೆ ಹೊರಡಲನುವಾದನು. ಇದನ್ನರಿತ ಸೀತಾಮಾತೆ ಮತ್ತು ಲಕ್ಷ್ಮಣರು ತಾವೂ ಶ್ರೀರಾಮನನ್ನು ಹಿಂಬಾಲಿಸಲು ನಿರ್ಧರಿಸಿದರು. ರಾಮನು ಮಾತಾಪಿತೃಗಳ ಅಪ್ಪಣೆ ಪಡೆದು ನಾರುವಸ್ತ್ರವನ್ನುಟ್ಟು ಅರಣ್ಯಕ್ಕೆ ತೆರಳಿದನು. ಅನುಸರಿಸಿ ಬರುತ್ತಿದ್ದ ಸಕಲ ಜನರಿಗೂ ಅಯೋಧ್ಯೆಗೆ ಮರಳುವಂತೆ ಹೇಳಿ ಅವರನ್ನು ಕಳುಹಿಸಿಕೊಟ್ಟು ಸೀತಾಲಕ್ಷ್ಮಣರಿಂದೊಡಗೂಡಿ ಹೊರಟು ಗಂಗಾನದೀ ತೀರದಲ್ಲಿ ಭಕ್ತನಾದ ಗುಹನಿಂದ ಪೂಜೆಯನ್ನು ಸ್ವೀಕರಿಸಿ ಮನೋಹರವಾದ ಜಟೆಯನ್ನು ಧರಿಸಿ ಗುಹನಿಂದ ಬೀಳ್ಕೊಂಡು ಹೊರಟು ಬೃಹಸ್ಪತ್ಯಾಚಾರ್ಯರ ಮಕ್ಕಳಾದ ಭಾರದ್ವಾಜಮುನಿಗಳಿಂದ ಪೂಜಿತನಾಗಿ ಅವರ ಅಪ್ಪಣೆ

ಪಡೆದು ಯಮುನಾನದಿಯನ್ನು ದಾಟಿ, ನಿರ್ಮಲವಾದ ಚಿತ್ರಕೂಟ ಪರ್ವತಕ್ಕೆ ಬಂದು ಅಲ್ಲಿ ಸುಖವಾಗಿ ವಾಸ-ಮಾಡಿದನು.

ಅತ್ತ ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ ವನವಾಸಕ್ಕೆ ತೆರಳಿದ ವಾರ್ತೆಯನ್ನಾಲಿಸಿ ಪುತ್ರನ ವಿರಹದುಃಖದಿಂದ ದಶರಥಮಹಾರಾಜನು ಸ್ವರ್ಗಸ್ಥನಾದನು. ಆಗ ವಸಿಷ್ಠಾದಿಗಳು ಕೇಕೆಯದೇಶದಲ್ಲಿ ವಾಸಿಸುತ್ತಿದ್ದ ಭರತ-ಶತ್ರುಘ್ನರನ್ನು ಕರೆಯಿಸಿ, ಅವರಿಗೆ ಸಮಸ್ತ ವೃತ್ತಾಂತವನ್ನರುಹಿ, ಅವರಿಂದ ಪಿತೃಕಾರ್ಯವನ್ನು ನೆರವೇರಿಸಿದರು.

ಅನಂತರ ಭರತನು ಶ್ರೀರಾಮನನ್ನು ಮತ್ತೆ ಅಯೋಧ್ಯೆಗೆ ಕರೆತರಲು ನಿರ್ಧರಿಸಿ, ಶ್ರೀರಾಮನ ಮಾರ್ಗವನ್ನೇ ಅನುಸರಿಸಿ ಸಚಿವರು, ವಸಿಷ್ಠಾದಿಮುನಿಗಳು, ತಾಯಿಯರೊಡನೆ ಹೊರಟು ಚಿತ್ರಕೂಟಕ್ಕೆ ಬಂದು ಶ್ರೀರಾಮನ ದರ್ಶನಮಾಡಿ ಅಯೋಧ್ಯೆಗೆ ಬಂದು ರಾಜ್ಯಭಾರ ಮಾಡಬೇಕೆಂದು ಪ್ರಾರ್ಥಿಸಿ ರಾಮನಿಗೆ ಶರಣಾಗತನಾದನು. ಭರತನಿಂದ, ತಂದೆಯಾದ ದಶರಥನು ತನ್ನ ವಿರಹದುಃಖದಿಂದ ಮೃತನಾದ ವಿಚಾರವನ್ನು ತಿಳಿದು ಶ್ರೀರಾಮನು ತಂದೆಯ ಮರಣಕ್ಕಾಗಿ ದುಃಖಿಸಿ, ದಶರಥಮಹಾರಾಜನಿಗೆ ತಿಲಾಂಜಲಿಯನ್ನು ಕೊಟ್ಟು, ಪ್ರೀತಿಯ ಸಹೋದರನಾದ ಭರತನನ್ನು ಸಮಾಧಾನಗೊಳಿಸಿದನು-ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

ಇಂಥ ಶ್ರೀರಾಮಚಂದ್ರನು ನಮ್ಮನ್ನು ರಕ್ಷಿಸಲಿ ಎಂದು ಶ್ರೀಗುರುರಾಜರು ಪ್ರಾರ್ಥಿಸಿರುವರು.

**ವಿಗ್ರಹ:** ಕೈಕೇಯ್ಯಾಃ ಪ್ರೀತಿಃ ಕೈಕೇಯಿಪ್ರೀತಿಃ, ತಸ್ಯಾಃ ಹೇತುಃ ಕೈಕೇಯಿಪ್ರೀತಿಹೇತುಃ, ತಸ್ಯ ಕೈಕೇಯೀ-ಪ್ರೀತಿಹೇತೋಃ ॥ ಸಹಜಶ್ಚ ನೃಪಜಾ ಚ ಸಹಜನೃಪಜೇ, ತಾಭ್ಯಾಂ ಸಹಿತಃ, ಸಸಹಜನೃಪಜಃ ॥ ವಲ್ಕಲಂ ಅಸ್ಯಾಸ್ತೀತಿ, ವಲ್ಕಲೀ ॥ ಗಂಗಾಂ ತರತೀತಿ ಗಂಗಾತಾರೀ ॥ ಗುಹೇನ ಅರ್ಚ್ಯಃ, ಗುಹಾರ್ಚ್ಯಃ ॥ ರುಚಿರಾ ಚ ಸಾ ಜಟಾ ಚ, ರುಚಿರಜಟಾ, ಕೃತಾ ರುಚಿರಜಟಾ ಯೇನ ಸಃ, ಕೃತರುಚಿರಜಟಃ ॥ ಗಿರಾಂ ಪತಿಃ, ಗೀಷ್ಪತಿಃ, ತಸ್ಯ ಗೀಷ್ಪತೇಃ ॥ ಪುತ್ರೇಣ ಮಾನ್ಯಃ, ಪುತ್ರಮಾನ್ಯಃ ॥ ಸ್ವಸ್ಯ ಅಂಬಾಃ ಸ್ವಾಂಬಾಃ, ತಾಭಿಃ, ಸ್ವಾಂಬಾಭಿಃ ॥ ಜನಕಸ್ಯ ಗತಿಃ ಜನಕಗತಿಃ, ಶ್ರುತಾ ಜನಕಗತಿಃ ಯೇನ ಸಃ, ಶ್ರುತಜನಕಗತಿಃ ॥ ವ್ಯಪ್ತಂ ತೀರ್ಥಂ ಯೇನ ಸಃ ವ್ಯಪ್ತತೀರ್ಥಃ ।

**ಅಲಂಕಾರ:** ಇಲ್ಲಿಯೂ ಸಹ ಹಿಂದಿನ ಪದ್ಯದಲ್ಲಿರುವ ''ಸಹೋಕ್ತಿ, ಕಾವ್ಯಲಿಂಗ, ಉದಾತ್ತ ಮತ್ತು ಉಲ್ಲೇಖಾ-ಲಂಕಾರಗಳು ಇವೆ. ॥ 3 ॥

**ದತ್ತ್ವೇತಿ ॥**

**ದತ್ತ್ವಾಸ್ಮೈ ಪಾದುಕೇ ಸ್ವೇ ಕ್ಷಿತಿಭರಣಕೃತೌ ಪ್ರೇಷ್ಯ ತಂ ಕಾಕನೇತ್ರಂ**
**ವ್ಯಸ್ಯಾರಾಧ್ಯೋಽತ್ರಿನಾಮ್ನಾ ವನಮಥ ಸಮಿತೋ ದಂಡಕಂ ತಾಪಸೇಷ್ಟಮ್ ।**
**ಕುರ್ವನ್ ಹತ್ವಾ ವಿರಾಧಂ ಖಲಕುಲದಮನಂ ಯಾಚಿತಸ್ತಾಪಸಾಗ್ರ್ಯೈಃ**
**ತೇಷಾಂ ದತ್ವಾಽಭಯಂ ಸ್ವಾನಸಿಧನುರಿಷುಧೀನ್ಯಾನಗಸ್ತ್ಯಾತ್ಸ ಪಾಯಾತ್ ॥ 4 ॥**

**ಅನ್ವಯಾರ್ಥ:** ಸಃ - ರಾಮದೇವರು, ಕ್ಷಿತಿಭರಣಕೃತೌ - ಕ್ಷಿತಿ - ಭೂಮಿಯ, ಭರಣ- ರಕ್ಷಣೆಯನ್ನು, ಕೃತೌ-ಮಾಡುವ ವಿಷಯದಲ್ಲಿ, ಸ್ವೇ- ತನ್ನ, ಪಾದುಕೇ- ಪಾದುಕೆಗಳನ್ನು, ಅಸ್ಮೈ- ಈ ಭರತನಿಗೆ, ದತ್ವಾ- ಕೊಟ್ಟು, ತಂ ಆ ಭರತನನ್ನು, ಪ್ರೇಷ್ಯ- ಕಳುಹಿಸಿ, ಕಾಕನೇತ್ರಂ- ಕಾಕ- ಕಾಗೆಯ, ನೇತ್ರಂ- ಕಣ್ಣಿನಲ್ಲಿರುವ, ತಂ- ಅಸುರನನ್ನು, ವ್ಯಸ್ಯ-

ನಿರಾಕರಿಸಿ, ಅಥ - ಚಿತ್ರಕೂಟ ವಾಸಾನಂತರ, ಅತ್ರಿನಾಮ್ನಾ- ಅತ್ರಿನಾಮಕ ಋಷಿಯಿಂದ, ಆರಾಧ್ಯಃ- ಪೂಜಿತನಾಗಿ, ದಂಡಕಂ ವನಂ- ದಂಡಕಾರಣ್ಯವನ್ನು, ಸಮಿತಃ- ಪ್ರಾಪ್ತನಾಗಿ, ತಾಪಸೇಷ್ಟಂ- ತಾಪಸ- ಶರಭಂಗನಾಮಕ ಋಷಿಗೆ, ಇಷ್ಟಂ- ಸ್ವಪದಪ್ರಾಪ್ತಿ- ರೂಪವಾದ ಕಾಮಿತವನ್ನು, ಕುರ್ವನ್- ಅನುಗ್ರಹಿಸಿ, ವಿರಾಧಂ- ವಿರಾಧನೆಂಬ ಅಸುರನನ್ನು, ಹತ್ವಾ- ಸಂಹರಿಸಿ, ಖಲಕುಲದಮನಂ- ಖಲ- ದುಷ್ಟರಾದ ರಾವಣಾದಿ ದೈತ್ಯರುಗಳ, ಕುಲ- ಸಮೂಹದ, ದಮನಂ- ನಿಗ್ರಹಕ್ಕಾಗಿ, (ದಮನೇ- ನಿಗ್ರಹ ವಿಷಯದಲ್ಲಿ), ತಾಪಸಾಗ್ರ್ಯೈಃ- ಋಷಿಶ್ರೇಷ್ಠರಿಂದ, ಯಾಚಿತಃ- ಪ್ರಾರ್ಥಿತನಾಗಿ, ತೇಷಾಂ- ಅವರುಗಳಿಗೆ, ಅಭಯಂ- ಆಶ್ವಾಸನವನ್ನು, ದತ್ವಾ- ನೀಡಿ, ಸ್ವಾನ್- ತನ್ನದಾದ, ಅಸಿಧನುರಿಷುಧೀನ್ ಅಸಿ- ಖಡ್ಗವನ್ನು, ಧನು- ಧನುಸ್ಸನ್ನು, ಇಷುಧಿ- ಬತ್ತಳಿಕೆ ಮೊದಲಾದವುಗಳನ್ನು, ಅಗಸ್ತ್ಯಾತ್- ಅಗಸ್ತ್ಯಮುನಿಗಳಿಂದ, ಯಾನ್- ಪಡೆದ, ಶ್ರೀರಾಮದೇವರು, ಪಾಯಾತ್- ರಕ್ಷಿಸಲಿ ॥

**ಕಥಾಭಿಪ್ರಾಯ:** ಭರತನು ರಾಜ್ಯಪಾಲನೆ ಮತ್ತು ರಕ್ಷಣೆಗಾಗಿ 'ಅಣ್ಣ! ನೀನು ಅಗತ್ಯವಾಗಿ ಅಯೋಧ್ಯೆಗೆ ಬರಬೇಕೆಂದು ಶ್ರೀರಾಮನನ್ನು ಮತ್ತೆ ಮತ್ತೆ ಪ್ರಾರ್ಥಿಸಿದನು. ಆಗ ಶ್ರೀರಾಮಚಂದ್ರನು ಸಹೋದರನನ್ನು ಸಮಾಧಾನ-ಪಡಿಸುತ್ತಾ ''ಭರತ! ಹದಿನಾಲ್ಕು ವರ್ಷ ವನವಾಸ ಮುಗಿದ ಕೂಡಲೇ ನಾನು ಖಂಡಿತವಾಗಿ ಅಯೋಧ್ಯೆಗೆ ಬಂದು ರಾಜ್ಯಭಾರ ಮಾಡುವೆನು. ಅಲ್ಲಿಯವರೆಗೆ ನೀನು ನನ್ನೀ ಪಾದುಕೆಗಳನ್ನು ನನ್ನ ಪ್ರತಿನಿಧಿತ್ವೇನ ತೆಗೆದುಕೊಂಡು ಹೋಗಿ ನನ್ನ ಪರವಾಗಿ ರಾಜ್ಯಬಾರ ಮಾಡುತ್ತಿರು. ಅವಧಿ ಮುಗಿದೊಡನೆ ನಾನು ಬರುವೆನು. ಇದು ಸತ್ಯ'' ಎಂದು ಭರತನಿಗೆ ಭರವಸೆಯಿತ್ತು ಅವನನ್ನೂ ತಾಯಿಯರನ್ನೂ ಕಳುಹಿಸಿಕೊಟ್ಟನು.

ಇದಾದ ಕೆಲದಿನಗಳ ಮೇಲೆ ತುರಂಗನೆಂಬ ಅಸುರನಿಂದ ಆವಿಷ್ಟನಾದ, ಕಾಗೆಯರೂಪದಲ್ಲಿದ್ದ ಇಂದ್ರನ ಪುತ್ರನಾದ ಜಯಂತನು ಸೀತಾದೇವಿಯನ್ನು ಹಿಂಸಿಸಲು ಶ್ರೀರಾಮನು ಒಂದು ತೃಣವನ್ನು ಅಭಿಮಂತ್ರಿಸಿ ಅವನ ಮೇಲೆ ಪ್ರಯೋಗಿಸಿ ಕಾಗೆಯ ರೂಪದಲ್ಲಿದ್ದ ಜಯಂತನ ಕಣ್ಣಿನಲ್ಲಿದ್ದ ತುರಂಗಾಸುರನನ್ನು ಸಂಹಾರಮಾಡಿ, ಶರಣಾಗತನಾದ ಜಯಂತನನ್ನು ಅವನ ಲೋಕಕ್ಕೆ ಕಳುಹಿಸಿಕೊಟ್ಟು, ಚಿತ್ರಕೂಟ ಪರ್ವತದಿಂದ ಸೀತಾ-ಲಕ್ಷ್ಮಣರೊಡನೆ ಹೊರಟು ಅತ್ರಿಮಹರ್ಷಿಗಳ ಆಶ್ರಮಕ್ಕೆ ಬಂದನು. ಅತ್ರಿ ಋಷಿಗಳು ಅರ್ಘ್ಯಪಾದ್ಯಾದಿಗಳಿಂದ ಶ್ರೀರಾಮನನ್ನು ಸತ್ಕರಿಸಿ, ಪೂಜಿಸಿದರು. ಅವರ ಸೇವೆಯನ್ನು ಸ್ವೀಕರಿಸಿದ ಶ್ರೀರಾಮಚಂದ್ರನು ಅವರಿಂದ ಬೀಳ್ಕೊಂಡು ದಂಡಕಾರಣ್ಯಕ್ಕೆ ಬಂದನು. ಅಲ್ಲಿ ಶರಭಂಗ ಋಷಿಗಳು ರಾಮನನ್ನು ಪೂಜಿಸಿ, ಅವನ ಸಮಕ್ಷ ಅಗ್ನಿಪ್ರವೇಶಮಾಡಿ ಪರಮಪದವನ್ನು ಪಡೆಯಲಾಶಿಸಿ ಪ್ರಾರ್ಥಿಸಿದರು. ಭಕ್ತವತ್ಸಲನಾದ ರಾಮಪ್ರಭುವು ಜೀರ್ಣಾಂಗರಾದ ಶರಭಂಗಮುನಿಗಳ ಮನೋರಥವನ್ನು ಪೂರ್ಣಮಾಡಿದನು.

ಹಿಂದೆ ತುಂಬುರನೆಂಬ ಗಂಧರ್ವನು ಊರ್ವಶಿಯ ಸಂಗಮಾಡಿ, ಕುಪಿತನಾದ ಕುಬೇರನ ಶಾಪಕೊಳ್ಳಗಾಗಿ ಈಗ ವಿರಾಧನೆಂಬ ರಾಕ್ಷಸನಾಗಿ ಜನಿಸಿದ್ದನು. ಶ್ರೀರಾಮನು ಲೋಕಕಂಟಕನಾದ ವಿರಾಧನನ್ನು ಸಂಹರಿಸಿ, ತುಂಬುರನ ಶಾಪಮೋಚನಮಾಡಿ ವಿರಾಧನ ದೇಹವನ್ನು ಬಿಲದಲ್ಲಿ ಹಾಕಿಸಿ, ತುಂಬುರನನ್ನು ಉದ್ಧರಿಸಿ ಗಂಧರ್ವಲೋಕಕ್ಕೆ ಅವನನ್ನು ಕಳುಹಿಸಿಕೊಟ್ಟನು. ಆ ತರುವಾಯ ಅನೇಕ ಋಷಿಮುನಿಗಳು ಬಂದು ರಾವಣಾದಿ ರಾಕ್ಷಸರನ್ನು ಸಂಹರಿಸಬೇಕೆಂದು ಪ್ರಾರ್ಥಿಸಲು, ರಾಮನು ಅವರಿಗೆ ಅವರಿಷ್ಟವನ್ನು ಪೂರ್ಣ ಮಾಡುವುದಾಗಿ ಆಶ್ವಾಸನಕೊಟ್ಟು, ರಾಮನಿಗೆ ಅರ್ಪಿಸ-ಬೇಕೆಂದು ಇಂದ್ರನು ಕೊಟ್ಟಿದ್ದ ಧನುಸ್ಸು-ಬಾಣ-ಅಕ್ಷಯ ಬತ್ತಳಿಕೆಗಳನ್ನು ಅಗಸ್ತ್ಯ ಋಷಿಗಳಿಂದ ಸ್ವೀಕರಿಸಿದನು-ಇತ್ಯಾದಿ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂಥ ಶ್ರೀರಾಮನು ನಮ್ಮನ್ನು ರಕ್ಷಿಸಲಿ ಎಂದು ಶ್ರೀಗುರುರಾಜರು ಪ್ರಾರ್ಥಿಸಿರುವರು.

**ವಿಗ್ರಹ:** ಕ್ಷಿತೇಃ ಭರಣಂ, ತಸ್ಯ ಕೃತಿಃ, ತಸ್ಯಾಮ್ ॥ ಕಾಕಸ್ಯ ನೇತ್ರಂ ಯಸ್ಯ ಸಃ ಕಾಕನೇತ್ರಃ, ತಮ್ ॥ ಅತ್ರಿರಿತಿ ನಾಮ ಯಸ್ಯ ಸಃ ಅತ್ರಿನಾಮಾ, ತೇನ ॥ ತಾಪಸಾನಾಂ ಇಷ್ಟಂ ತಾಪಸೇಷ್ಟಮ್ ॥ ಖಲಾನಾಂ ಕುಲಂ ಖಲಕುಲಂ, ತಸ್ಯ ದಮನಮ್ ॥ ತಾಪಸಾನಾಮಗ್ರ್ಯಾಃ ತಾಪಸಾಗ್ರ್ಯಾಃ, ತೈಃ ॥ ಇಷವಃ ಧೀಯಂತೇ ಅಸ್ಮಿನ್ನಿತಿ ಇಷುಧಿಃ, ಅಸಿಶ್ಚ ಧನುಶ್ಚ ಇಷುಧಿಶ್ಚ ಅಸಿಧನುರಿಷುಧಯಃ, ತಾನ್ ॥ ಅಗಂ ಸ್ತಾಯತೀತಿ ಅಗಸ್ತ್ಯಃ, ತಸ್ಮಾತ್ ॥

**ಅಲಂಕಾರ:** ಇಲ್ಲಿಯೂ "ಕಾವ್ಯಲಿಂಗ, ಉದಾತ್ತ" ಅಲಂಕಾರಗಳೂ ಮತ್ತು "ವೃತ್ತ್ಯನುಪ್ರಾಸಾದಿ" ಶಬ್ದಾಲಂ-ಕಾರಗಳೂ ಇವೆ.

'ವೃತ್ತ್ಯನುಪ್ರಾಸ' ಲಕ್ಷಣ- 'ವೃತ್ತ್ಯನುಪ್ರಾಸ ಏಕಸ್ಯಾಪ್ಯಾವೃತ್ತಿರಸಕೃದ್ಯಧಾ ।'

ದೃಷ್ಟಾಂತ- 'ವಿಜಯೀಂದ್ರೋ ವಿಲೋಲಾಕ್ಷಿ ವೀಕ್ಷಣಾಕ್ಷತಹೃತ್ ಕ್ಷಿತೌ ॥ – ಅಲಂಕಾರಮಂಜರೀ ॥ 4 ॥

**ಆಸೀನೇತಿ ॥**

**ಆಸೀನಃ ಪಂಚವಟ್ಯಾಮಕುರುತ ವಿಕೃತಾಂ ರಾಕ್ಷಸೀಂ ಯೋ ದ್ವಿಸಪ್ತ-**
**ಕ್ರವ್ಯಾದಾನಪ್ಯನೇಕಾನಥ ಖರಮವಧೀದ್ದೂಷಣಂ ಚ ತ್ರಿಶೀರ್ಷಮ್ ।**
**ಮಾರೀಚಂ ಮಾರ್ಗರೂಪಂ ದಶವದನಹೃತಾಮಾಕೃತಿಂ ಭೂಮಿಜಾಯಾಃ**
**ಅನ್ವಿಷ್ಯನ್ನಾರ್ತಗೃಧ್ರಂ ಸ್ವಗತಿಮಥ ನಯನ್ಮಾಮವೇತ್ ಘ್ನನ್ ಕಬಂಧಮ್ ॥ 5 ॥**

**ಅನ್ವಯಾರ್ಥ:** ಯಃ –ಯಾವ ರಾಮದೇವನು, ಪಂಚವಟ್ಯಾಂ – ಪಂಚವಟಿನಾಮಕ ಪುಣ್ಯಭೂಮಿಯಲ್ಲಿ, ಆಸೀನಃ – ಇರತಕ್ಕವನಾಗಿ, ರಾಕ್ಷಸೀಂ – ಶೂರ್ಪಣಖಿಯನ್ನು, ವಿಕೃತಾಂ – ವಿಕಾರಾಂಗಿಯನ್ನಾಗಿ, ಅಕುರುತ – ಮಾಡಿದನೋ, ಅನಂತರಂ – ತರುವಾಯ, ದ್ವಿಸಪ್ತ – ಹದಿನಾಲ್ಕು ಸಂಖ್ಯಾಕರಾದ, ಕ್ರವ್ಯಾದಾನ್ – ಪ್ರಧಾನ ರಾಕ್ಷಸರುಗಳನ್ನೂ, ಅಪಿ-ಮತ್ತು, ಅನೇಕಾನ್ ಬಹುಸಂಖ್ಯಾಕರಾದ ರಾಕ್ಷಸರನ್ನೂ, ಖರಂ – ಖರನೆಂಬ ರಾಕ್ಷಸನನ್ನೂ, ದೂಷಣಂ – ದೂಷಣನೆಂಬ ರಾಕ್ಷಸನನ್ನೂ, ತ್ರಿಶೀರ್ಷಂ – ತ್ರಿಶೀರ್ಷನೆಂಬ ರಾಕ್ಷಸನನ್ನೂ , ಅವಧೀತ್ – ಸಂಹಾರ ಮಾಡಿದನೋ, ಮಾರ್ಗರೂಪಂ – ಜಿಂಕೆಯ ರೂಪಧಾರಿಯಾದ, ಮಾರೀಚಂ – ಮಾರೀಚನಾಮಕ ರಾಕ್ಷಸನನ್ನು, ಅವಧೀತ್ – ಕೊಂದನೋ, ದಶವದನಹೃತಾಂ – ದಶವದನ – ರಾವಣನಿಂದ, ಹೃತಾಂ – ಅಪಹರಿಸಲ್ಪಟ್ಟ, ಭೂಮಿಜಾಯಾಃ – ಸೀತಾದೇವಿಯ, ಆಕೃತಿಂ – ಪ್ರತಿಕೃತಿಯನ್ನು, ಅನ್ವಿಷ್ಯನ್ – ಹುಡುಕತಕ್ಕವನಾಗಿ, ಅಥ – ಅನಂತರದಲ್ಲಿ, ಆರ್ತಗೃಧ್ರಂ – ಆರ್ತ – ಬಳಲಿದ, ಗೃಧ್ರಂ – ಜಟಾಯುವನ್ನು, ಸ್ವಗತಿಂ – ನಿಜಪದವನ್ನು, ನಯನ್ – ಹೊಂದಿಸತಕ್ಕವನಾಗಿ, ಕಬಂಧಂ – ಕಬಂಧನಾಮಕ ರಾಕ್ಷಸನನ್ನು, ಘ್ನನ್ – ಸಂಹಾರಮಾಡಿದ ಶ್ರೀರಾಮಚಂದ್ರದೇವರು, ಮಾಂ – ನನ್ನನ್ನು, ಅವೇತ್ – ರಕ್ಷಣ ಮಾಡಲಿ.

**ಕಥಾಭಿಪ್ರಾಯ:** ಶ್ರೀರಾಮಚಂದ್ರನು ಪಂಚವಟಿಯಲ್ಲಿ ಸೀತಾ ಲಕ್ಷ್ಮಣರೊಡನೆ ಆನಂದದಿಂದ ವಾಸಮಾಡು-ತ್ತಿರುವಾಗ ಅಲ್ಲಿಗೆ ರಾಕ್ಷಸೇಶ್ವರನಾದ ರಾವಣನ ತಂಗಿಯಾದ ಶೂರ್ಪಣಖಿಯು ಬಂದು ಶ್ರೀರಾಮನನ್ನು ಕಂಡು ಮೋಹಿತಳಾದಳು.

ಹಿಂದೊಮ್ಮೆ ರಾವಣನು ಯುದ್ಧದಲ್ಲಿ ತಿಳಿಯದಂತೆ ಬಿಟ್ಟಬಾಣವು ಶೂರ್ಪಣಖಿಯ ಪತಿಯ ದೇಹವನ್ನು ಹೊಕ್ಕು ಅವನು ಮೃತನಾದನು. ಪತಿಯ ಮರಣದಿಂದ ದುಃಖಸಂತಪ್ತಳಾದ ಶೂರ್ಪಣಖಿಯು "ಅಣ್ಣ ನೀನು ನನ್ನ ಪತಿಯನ್ನು

ಸಂಹರಿಸಿದಿ. ಈಗ ನನ್ನ ಗತಿಯೇನು?'' ಎಂದು ಗೋಳಿಡಲು ತನ್ನಿಂದಾದ ಅಚಾತುರ್ಯಕ್ಕಾಗಿ ವಿಷಾದಿಸಿದ ರಾವಣನು ''ತಂಗಿ, ನಿನಗೆ ಇಷ್ಟರಾದವರನ್ನು ನೀನು ವರಿಸು. ನೀನು ವರಿಸಿದವನೊಡನೆ ನಾನು ನಿನಗೆ ವಿವಾಹಮಾಡಿಸುವೆನು'' ಎಂದು ಹೇಳಿದನು. ಅಣ್ಣನ ಮಾತನ್ನಾಲಿಸಿ ಮುದಗೊಂಡ ಶೂರ್ಪಣಖಿಯು ಇಷ್ಟನಾದ ಪತಿಯನ್ನು ಅರಸುತ್ತಾ ಪಂಚವಟಿಗೆ ಬಂದಳು. ಅಲ್ಲಿ ಸೀತಾಸಮೇತನಾದ ಸರ್ವಾಂಗಸುಂದರನಾದ ರಾಮಚಂದ್ರನನ್ನು ಕಂಡು ''ಸುಂದರಾಂಗ! ನೀನು ನನ್ನನ್ನು ಲಗ್ನವಾಗು'' ಎಂದು ಕೋರಿದಳು. ರಾಮನು ನಸುನಗುತ್ತಾ ''ನಾನೀಗ ಏಕಪತ್ನೀವ್ರತಸ್ಥನು. ನನಗಿಂತ ಸುಂದರನಾದ ನನ್ನ ತಮ್ಮನಿರುವನು. ಅವನನ್ನು ನೀನು ವರಿಸು'' ಎಂದು ಲಕ್ಷ್ಮಣನೆಡೆಗೆ ಅವಳನ್ನು ಕಳುಹಿಸಿದನು. ಅಣ್ಣನ ಅಭಿಪ್ರಾಯವನ್ನರಿತ ಲಕ್ಷ್ಮಣನು ಶೂರ್ಪಣಕಿಯ ಕಿವಿ-ಮೂಗುಗಳನ್ನು ಕತ್ತರಿಸಿಹಾಕಿದನು. ತನಗಾದ ಈ ಪರಾಭವದಿಂದ ಕ್ರುದ್ಧಳಾದ ಶೂರ್ಪಣಖಿಯು ಸೈನ್ಯಸಹಿತರಾಗಿದ್ದ ಖರ-ದೂಷಣಾದಿಗಳನ್ನು ರಾಮಲಕ್ಷ್ಮಣರ ಮೇಲೆ ಯುದ್ಧಕ್ಕೆ ಕಳಿಸಿದಳು. ದೈತ್ಯರು ರಾಮಲಕ್ಷ್ಮಣರನ್ನು ಆಕ್ರಮಿಸಲು ಧಾವಿಸಿದರು. ಆಗ ಶ್ರೀರಾಮಚಂದ್ರನು ಹದಿನಾಲ್ಕು ಜನ ಪ್ರಧಾನ ರಾಕ್ಷಸರನ್ನೂ, ಬಹುಸಂಖ್ಯಾಕರಾದ ರಾಕ್ಷಸರನ್ನೂ, ಖರ-ದೂಷಣ ತ್ರಿಶೀರ್ಷರೆಂಬ ರಾಕ್ಷಸರನ್ನೂ ಸಂಹಾರ ಮಾಡಿದನು.

ಎಲ್ಲಾ ರಾಕ್ಷಸರೂ ನಾಶವಾದುದನ್ನು ಕಂಡ ಶೂರ್ಪಣಖಿಯು ಕಡುನೊಂದು ರಾವಣನಲ್ಲಿ ಎಲ್ಲ ವೃತ್ತಾಂತವನ್ನೂ ತಿಳಿಸಿದಳು. ತಂಗಿಗಾದ ದುರವಸ್ಥೆಯನ್ನು ಕಂಡು ಕುಪಿತನಾದ ರಾವಣನು ರಾಮನ ಮೇಲೆ ಸೇಡುತೀರಿಸಿಕೊಳ್ಳಲು ನಿಶ್ಚಯಿಸಿ ಸೀತಾರಾಮರನ್ನು ಬೇರ್ಪಡಿಸುವಂತೆ ಮಾವನಾದ ಮಾರೀಚನಿಗೆ ಪ್ರೇರೇಪಿಸಿ ಕಳುಹಿಸಿದನು. ಮಾರೀಚನು ಬಂಗಾರದ ಜಿಂಕೆಯ ರೂಪದಿಂದ ಸೀತೆಯ ಮುಂದೆ ಸುಳಿದಾಡುತ್ತಾ ಪ್ರಲೋಭನಗೊಳಿಸಹತ್ತಿದನು. ಸೀತಾದೇವಿಯು ತನಗೆ ಆ ಕನಕಮೃಗವನ್ನು ತಂದು ಕೊಡುವಂತೆ ರಾಮನನ್ನು ಪ್ರಾರ್ಥಿಸಿದಳು. ಶ್ರೀರಾಮನು ಕನಕಮೃಗವನ್ನು ನೋಡಿ ಇದು ರಾಕ್ಷಸಮಾಯೆಯೆಂದರಿತು ಅದನ್ನು ಬೆನ್ನಟ್ಟಿಹೋಗಿ ದೂರ ಪ್ರದೇಶದಲ್ಲಿ ಮೃಗರೂಪಿಯಾದ ಮಾರೀಚನನ್ನು ಸಂಹರಿಸಿದನು. ಪ್ರಾಣ ಬಿಡುವಾಗ ಮಾರೀಚನು ''ಹಾ ಸೀತೆ, ಹಾ ಲಕ್ಷ್ಮಣ'' ಎಂದು ರಾಮನ ಸ್ವರವನ್ನು ಅನುಕರಿಸಿ ಕೂಗಿದನು. ಸೀತೆಯು ಅದು ರಾಮನ ಧ್ವನಿಯೆಂದು ಭ್ರಮಿಸಿದವಳಂತೆ ನಟಿಸಿ ಲಕ್ಷ್ಮಣನನ್ನು ರಾಮನ ಸಹಾಯಕ್ಕೆ ಕಳುಹಿಸಿದಳು.

ಲಕ್ಷ್ಮಣನು ಆಶ್ರಮದಿಂದ ತೆರಳಿದ ಕೂಡಲೇ ರಾವಣನು ಅಲ್ಲಿಗೆ ಭಿಕ್ಷು ರೂಪದಿಂದ ಬಂದನು. ರಾವಣನು ತನ್ನನ್ನು ಅಪಹರಿಸಲು ಬರುತ್ತಿರುವುದನ್ನು ತಿಳಿದ ಸೀತಾದೇವಿಯು ತನ್ನಂತಿರುವ ಒಂದು ಪ್ರತಿಕೃತಿಯನ್ನು (ಸೀತೆಯನ್ನು ಹೋಲುವ ಸ್ತ್ರೀ) ನಿರ್ಮಿಸಿ ಅಲ್ಲಿಂದ ಅದೃಶ್ಯಳಾಗಿ ಕೈಲಾಸಕ್ಕೆ ತೆರಳಿ ಅಲ್ಲಿ ಶಿವಪಾರ್ವತಿಯರಿಂದ ಪೂಜೆಗೊಳ್ಳಹತ್ತಿದಳು.

ರಾವಣನು ಸೀತಾಪ್ರತಿಕೃತಿಯನ್ನೇ ಸೀತೆಯೆಂದು ಭ್ರಮಿಸಿ ಆ ಸೀತಾಕೃತಿಯನ್ನು ಅಪಹರಿಸಿ ಲಂಕೆಗೆ ಕೊಂಡೊಯ್ದು ಅಶೋಕವನದಲ್ಲಿ ಭದ್ರವಾದ ಕಾವಲಿನಲ್ಲಿರಿಸಿದನು.

ಇತ್ತ ಶ್ರೀರಾಮನು ಆಶ್ರಮಕ್ಕೆ ಮರಳಿ ಬರುತ್ತಿರುವಾಗ ಲಕ್ಷ್ಮಣನನ್ನು ಕಂಡು ಅವನೊಡನೆ ಆಶ್ರಮಕ್ಕೆ ಧಾವಿಸಿದನು. ಅಲ್ಲಿ ಸೀತಾದೇವಿಯನ್ನು ಕಾಣದೆ ದುಃಖಿಸುವವನಂತೆ, ಸೀತೆಯನ್ನು ಹುಡುಕುವವನಂತೆ ನಟಿಸುತ್ತಾ ಲಕ್ಷ್ಮಣನೊಡನೆ ಅಲ್ಲಿಂದ ಸೀತೆಯನ್ನು ಹುಡುಕುತ್ತಾ ಹೊರಟನು. ರಾವಣನು ಸೀತೆಯನ್ನಪಹರಿಸಿಕೊಂಡು ಹೋಗುತ್ತಿರುವುದನ್ನು ಕಂಡು, ದಶರಥ ಮಹಾರಾಜನ ಸ್ನೇಹಿತನಾದ ಜಟಾಯುವು ರಾವಣನನ್ನು ತರುಬಿ ಸೀತೆಯನ್ನು ಬಿಡಿಸಲು ಯುದ್ಧಮಾಡಿ ಕೊನೆಗೆ ಬಹುವಾಗಿ ಗಾಯಗೊಂಡು ಧರೆಗುರುಳಿದನು. ಸೀತಾಕೃತಿಯನ್ನು ಅರಸುತ್ತಾ ಹೊರಟ ರಾಮನು ಅಲ್ಲಿಗೆ ಬಂದು ಜಟಾಯುವಿನಿಂದ ರಾವಣನು ಸೀತಾಕೃತಿಯನ್ನಪಹರಿಸಿಕೊಂಡು ಹೋದ ವಿಚಾರವರಿತು, ತನ್ನ ಸಾನ್ನಿಧ್ಯದಲ್ಲಿ ಮೃತನಾದ ಜಟಾಯುವಿಗೆ ಪರಮಪದವನ್ನಿತ್ತು ಮುಂದೆ ಹೊರಟು ಕಬಂಧನೆಂಬ ರಾಕ್ಷಸನನ್ನು ಸಂಹರಿಸಿ ಅವನ ದೇಹದಲ್ಲಿ ಸೇರಿದ್ದ

''ಸೇವಕನಾದ'' ಎಂಬ ಗಂಧರ್ವನನ್ನು ಮೋಚನಮಾಡಿದನು-ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತ-ವಾಗುವುದು. ಇಂಥಾ ಶ್ರೀರಘುಕುಲಲಲಾಮನು ನಮ್ಮನ್ನು ರಕ್ಷಿಸಲಿ ಎಂದು ಭಾವ.

**ವಿಗ್ರಹ:** ಪಂಚಾನಾಂ ವಟಾನಾಂ ಸಮಾಹಾರಃ ಪಂಚವಟೀ, ತಸ್ಯಾಮ್ ॥ ದ್ವಿಗುಣಾಶ್ಚ ತೇ ಸಪ್ತ ಚ ದ್ವಿಸಪ್ತ ॥ ಕ್ರವ್ಯಂ ಅದಂತೀತಿ ಕ್ರವ್ಯಾದಾಃ, ತಾನ್ ॥ ತ್ರೀಣಿ ಶೀರ್ಷಾಣಿ ಯಸ್ಯ ಸಃ, ತ್ರಿಶೀರ್ಷಃ, ತಮ್ ॥ ಮರೀಚೇಃ ಅಪತ್ಯಂ ಪುಮಾನ್ ಮಾರೀಚಃ, ತಮ್ ॥ ಮೃಗಸ್ಯ ಇದಂ ಮಾರ್ಗಂ, ಮಾರ್ಗಂ ರೂಪಂ ಯಸ್ಯ ಸಃ ಮಾರ್ಗರೂಪಃ, ತಂ ಮಾರ್ಗ-ರೂಪಮ್ ॥ ದಶವದನಾನಿ ಯಸ್ಯ ಸಃ, ತೇನ ಹೃತಾ, ತಾಂ- ದಶವದನಹೃತಾಮ್ ॥ ಭೂಮೇಃ ಜಾಯತ ಇತಿ ಭೂಮಿಜಾ, ತಸ್ಯಾಃ ಭೂಮಿಜಾಯಾಃ ॥ ಆರ್ತಶ್ಚಾಸೌ ಗೃಧ್ರಶ್ಚ ಆರ್ತಗೃಧ್ರಃ, ತಮ್ ॥ ಸ್ವಸ್ಯ ಗತಿಃ ಸ್ವಗತಿಃ, ತಾಮ್ ॥ ನಯತೀತಿ ನಯನ್ ॥ ಹಂತೀತಿ ಘ್ನನ್ ॥

**ಅಲಂಕಾರ:** ಇಲ್ಲಿಯೂ ಹಿಂದೆ ಹೇಳಿದ ಅಲಂಕಾರಗಳಿವೆ. ॥ 5 ॥

**ಪಂಪೇತಿ** ॥

**ಪಂಪಾತೀರಂ ಚ ಗಚ್ಛನ್ನಿಹ ಕೃತವಸತಿರ್ಭಕ್ತಿತುಷ್ಟಃ ಶ್ಯಬರ್ಯೈ**
**ದತ್ವಾ ಮುಕ್ತಿಂ ಪ್ರಕುರ್ವನ್ ಹನುಮತ ಉದಿತಂ ಪ್ರಾಪ್ತಸುಗ್ರೀವಸಖ್ಯಮ್ ।**
**ಸಪ್ತ ಛಿತ್ವಾಽಥ ತಾಲಾನ್ವಿಧಿವರಬಲಿನೋ ವಾಲಿಭಿತ್ಸೂರ್ಯಸೂನುಂ**
**ಕುರ್ವಾಣೋ ರಾಜ್ಯಪಾಲಂ ಸಮವತು ನಿವಸನ್ಮಾಲ್ಯವತ್ಕಂದರೇಽಸೌ ॥ 6 ॥**

**ಅನ್ವಯಾರ್ಥ:** ಅಸೌ- ರಾಮದೇವರು, ಪಂಪಾತೀರಂ (ಸ) ಚ – ಪಂಪಾ- ಪಂಪಾ ಎಂಬ ಪುಣ್ಯನದಿಯ, ತೀರಂ-ದಂಡೆಗೆ, ಗಚ್ಛನ್- ಹೋಗಿ, ಇಹ- ಈ ಪಂಪಾತೀರದಲ್ಲಿ, ಕೃತವಸತಿ: ವಾಸಮಾಡಿ, ಭಕ್ತಿತುಷ್ಟಃ – ಭಕ್ತಿಯಿಂದ ಸಂತೋಷಗೊಂಡು, ಶಬರ್ಯೈ- ಶಬರಿ ಎಂಬ ಭಕ್ತಳಿಗೆ, ಮುಕ್ತಿಂ- ಮೋಕ್ಷವನ್ನು, ದತ್ವಾ- ಕರುಣಿಸಿ (ಕೊಟ್ಟು), ಹನುಮತಃ- ಹನುಮಂತದೇವರ, ಉದಿತಂ- ವಾಕ್ಯವನ್ನು ಪ್ರಕುರ್ವನ್- ನಡೆಸಿಕೊಟ್ಟು, ಪ್ರಾಪ್ತಸುಗ್ರೀವಸಖ್ಯಃ-ಸುಗ್ರೀವನ ಸ್ನೇಹವನ್ನು ಹೊಂದಿದವರಾಗಿ, ಅಥ- ಅನಂತರದಲ್ಲಿ, ವಿಧಿವರ ಬಲಿನಃ, ವಿಧಿ- ಬ್ರಹ್ಮದೇವರ, ವರ-ವರದಿಂದ, ಬಲಿನಃ- ಬಲಿಷ್ಠರಾದ, ಸಪ್ತ- ಏಳು ಸಂಖ್ಯಾಕರಾದ, ತಾಲಾನ್- ತಾಳಾವೃಕ್ಷಸ್ವರೂಪರಾದ ದೈತ್ಯರನ್ನು, ಛಿತ್ವಾ-ಭೇದಿಸಿ, ವಾಲಿಭಿತ್- ವಾಲಿಯನ್ನು ಸಂಹರಿಸಿದವರಾಗಿ, ಸೂರ್ಯಸೂನುಂ- ಸೂರ್ಯನ ಮಗನಾದ ಸುಗ್ರೀವನನ್ನು, ರಾಜ್ಯಪಾಲಂ- ಕಿಷ್ಕಿಂಧೆಯ ರಾಜನನ್ನಾಗಿ, ಕುರ್ವಾಣಃ- ಮಾಡಿದವರಾಗಿ, ಮಾಲ್ಯವಂತ್ಕಂದರೇ- ಮಾಲ್ಯವತ್-ಮಾಲ್ಯವಂತ ಪರ್ವತದ ಕಂದರೇ- ಗುಹೆಯಲ್ಲಿ, ನಿವಸನ್- ವಾಸಮಾಡಿದ ಕೌಸಲ್ಯಾನಂದನನಾದ ಶ್ರೀರಾಮನು, ಸಮವತು-ರಕ್ಷಿಸಲಿ ॥

**ಕಥಾಭಿಪ್ರಾಯ:** ಶ್ರೀರಾಮಲಕ್ಷ್ಮಣರು ಪಂಚವಟಿಯಿಂದ ಹೊರಟು ಪಂಪಾತೀರದಲ್ಲಿದ್ದ ಮತಂಗಮುನಿಗಳ ಆಶ್ರಮಕ್ಕೆ ಬಂದರು. ಅಲ್ಲಿ ಅವರು ಶ್ರೀರಾಮನಾಮ ಜಪಮಾಡುತ್ತಾ ಶ್ರೀರಾಮನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಶಬರಿಯನ್ನು ಕಂಡರು. ಹಿಂದೆ ಇಂದ್ರದೇವರ ಮುಂದೆ ತನ್ನ ದರ್ಪವನ್ನು ತೋರಿ ಶಚೀದೇವಿಯ ಶಾಪಕ್ಕೊಳಗಾಗಿದ್ದ ಅಪ್ಸರೆಯೇ ಈಗ ಶಬರಿಯಾಗಿ ಜನಿಸಿದ್ದಳು. ಶ್ರೀರಾಮಲಕ್ಷ್ಮಣರನ್ನು ಕಂಡ ಶಬರಿಯು ಪರಮಾನಂದಭರಿತಳಾಗಿ ಅವರನ್ನು ಸತ್ಕರಿಸಿ ತನಗೆ ಮೋಕ್ಷವನ್ನು ದಯಪಾಲಿಸಬೇಕೆಂದು ಶ್ರೀರಾಮನನ್ನು ಪ್ರಾರ್ಥಿಸಿದಳು. ಶಬರಿಯ ಭಕ್ತಿಗೆ ಮೆಚ್ಚಿ

ಶ್ರೀರಾಮನು ಅಗ್ನಿಪ್ರವೇಶದ್ವಾರಾ ಅವಳಿಗೆ ಮೋಕ್ಷವನ್ನು ಅನುಗ್ರಹಿಸಿ ಅಲ್ಲಿಂದ ಋಷ್ಯಮೂಕಪರ್ವತಕ್ಕೆ ಲಕ್ಷ್ಮಣನೊಡನೆ ಬಂದನು.

ಅಲ್ಲಿ ಶ್ರೀ ಹನುಮಂತದೇವರನ್ನು ಕಂಡು ''ನೀನು ಯಾರು?'' ಎಂದು ಪ್ರಶ್ನಿಸಿದನು. ಅತ್ಯಂತ ಭಕ್ತಿವಿನಯಗಳಿಂದ ಹನುಮಂತನು ಶ್ರೀರಾಮನಿಗೆರಗಿ ''ದೇವ! ವಾಯುಪುತ್ರನಾದ ನನ್ನನ್ನು ಹನುಮಂತನೆನ್ನುವರು. ನಾನು ಸುಗ್ರೀವನ ಗೆಳೆಯನು ಮತ್ತು ತಮ್ಮ ಪಾದಸೇವಕನು'' ಎಂದು ವಿಜ್ಞಾಪಿಸಿ ವಾಲಿ ಸುಗ್ರೀವರ ವೃತ್ತಾಂತವನ್ನರುಹಿ ಸುಗ್ರೀವನಿಗೆ ಸಹಾಯಮಾಡಬೇಕೆಂದು ಪ್ರಾರ್ಥಿಸಿ ಸುಗ್ರೀವನನ್ನು ಕರೆತಂದು ಪರಿಚಯ ಮಾಡಿಸಿದನು. ಸುಗ್ರೀವನು ಶ್ರೀರಾಮನ ಪಾದಾರವಿಂದಗಳಿಗೆ ನಮಸ್ಕರಿಸಿ ಶ್ರೀರಾಮನ ಆಗಮನ ಕಾರಣವನ್ನು ತಿಳಿದು ''ಪ್ರಭು, ಸೀತಾನ್ವೇಷಣ ವಿಷಯದಲ್ಲಿ ನಾನು ನಿನಗೆ ಸಹಾಯ ಮಾಡುವೆನು. ನೀನು ವಾಲಿಯನ್ನು ಸಂಹರಿಸಬೇಕು'' ಎಂದು ವಿಜ್ಞಾಪಿಸಿದನು. ಸೂರ್ಯಪುತ್ರನಾದ ಸುಗ್ರೀವನ ಮಾತುಕೇಳಿ ರಾಮನು ಅದಕ್ಕೆ ಸಮ್ಮತಿಸಿದನು. ಅನಂತರ ಸುಗ್ರೀವನು ಅಗ್ನಿಸಾಕ್ಷಿಯಾಗಿ ಸೀತಾನ್ವೇಷಣ ವಿಷಯವಾಗಿ ಪ್ರತಿಜ್ಞೆ ಮಾಡಿದನು. ಶ್ರೀರಾಮನೂ ವಾಲಿಯನ್ನು ಸಂಹರಿಸುವುದಾಗಿ ಪ್ರತಿಜ್ಞೆ ಮಾಡಿದನು. ಅನಂತರ ಸುಗ್ರೀವನು ವಾಲಿಯ ಪರಾಕ್ರಮಾದಿಗಳನ್ನು ವರ್ಣಿಸಿ ''ದೇವ! ನಿನ್ನ ಬಲವನ್ನು ತೋರು'' ಎಂದು ಭಿನ್ನವಿಸಿದನು. ಶ್ರೀರಾಮನು ಒಂದೇ ಒಂದು ಬಾಣದಿಂದ ಬ್ರಹ್ಮದೇವರ ವರಬಲದಿಂದ ಅಚ್ಛೇದ್ಯರೂ ಅವಧ್ಯರೂ ಆದ ಸಪ್ತತಾಲ-ವೃಕ್ಷರೂಪದಿಂದಿದ್ದ ಏಳು ಜನ ದೈತ್ಯರನ್ನು ಏಕಕಾಲದಲ್ಲಿ ಭೇದಿಸಿ ತನ್ನ ಅದ್ಭುತ ಪರಾಕ್ರಮವನ್ನು ಪ್ರದರ್ಶಿಸಿದನು. ತರುವಾಯ ವಾಲಿಯನ್ನು ಸಂಹರಿಸಿ ಸುಗ್ರೀವನನ್ನು ಕಿಷ್ಕಿಂಧಾಪುರಕ್ಕೆ ರಾಜನನ್ನಾಗಿ ಮಾಡಿ ಸುಗ್ರೀವಾದಿಗಳನ್ನು ಸಂತೋಷಪಡಿಸಿ ವರ್ಷಾಕಾಲವಾದ್ದರಿಂದ ನಾಲ್ಕು ತಿಂಗಳಕಾಲ ಅಲ್ಲೇ ವಾಸಿಸಲು ಇಚ್ಛಿಸಿ ಶ್ರೀರಾಮಚಂದ್ರನು ಮಾಲ್ಯವತ್ ಪರ್ವತದ ತಪ್ಪಲ ಪ್ರದೇಶದಲ್ಲಿದ್ದ ಗುಹೆಯಲ್ಲಿ ಲಕ್ಷ್ಮಣನೊಡನೆ ವಾಸಮಾಡಿದನು-ಇತ್ಯಾದಿ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

**ವಿಗ್ರಹ:** ಪಂಪಾಯಾಃ ತೀರಂ ಪಂಪಾತೀರಂ, ತತ್ ॥ ಕೃತಾ ವಸತಿಃ ಯೇನ ಸಃ ಭಕ್ತ್ಯಾತುಷ್ಟಃ ಭಕ್ತಿತುಷ್ಟಃ ॥ ಹನು ಅಸ್ಯಾಸ್ತೀತಿ ಹನುಮಾನ್, ತಸ್ಯ ಹನುಮತಃ ॥ ಶೋಭನಾ ಗ್ರೀವಾ ಯಸ್ಯ ಸಃ- ಸುಗ್ರೀವಃ, ತಸ್ಯ ಸಖ್ಯಂ, ಸುಗ್ರೀವಸಖ್ಯಂ, ಸುಗ್ರೀವಸಖ್ಯಂ ಪ್ರಾಪ್ತಃ ಪ್ರಾಪ್ತಸುಗ್ರೀವಸಖ್ಯಃ, ತಮ್ ॥ ವಿಧೇಃ ವರಃ ವಿಧಿವರಃ, ತೇನ ಬಲಿನಃ ॥ ವಾಲಿನಂ ಭಿನತ್ತಿ ಇತಿ ವಾಲಿಭಿತ್ ॥ ಸೂರ್ಯಸ್ಯ ಸೂನುಃ ಸೂರ್ಯಸೂನುಃ, ತಮ್ ॥ ರಾಜ್ಯಸ್ಯ ಪಾಲಃ ರಾಜ್ಯಪಾಲಃ, ತಮ್ ॥ ಮಾಲ್ಯವತಃ ಕಂದರಃ ಮಾಲ್ಯವತ್ಕಂದರಃ, ತಸ್ಮಿನ್ ॥

**ಅಲಂಕಾರಗಳು:** ಇಲ್ಲಿಯೂ ಸಹ 'ಕಾವ್ಯಲಿಂಗ, ಪರಿಕರ' ಮುಂತಾದ ಪೂರ್ವೋಕ್ತ ಅಲಂಕಾರಗಳಿವೆ. ॥ 6 ॥

ನೀತ್ವೇತಿ ॥

**ನೀತ್ವಾ ಮಾಸಾನ್ ಕಪೀಶಾನಿಹ ದಶಹರಿತಃ ಪ್ರೇಷ್ಯ ಸೀತಾಂ ವಿಚಿತ್ಯಾ-**
**ಽಽಯಾತ ಶ್ರೀಮದ್ಧನೂಮದ್ಗಿರಮಥ ಸಮನುಶ್ರುತ್ಯ ಗಚ್ಛನ್ ಕಪೀಂದ್ರೈಃ ।**
**ಸುಗ್ರೀವಾದ್ಯೈರಸಂಖ್ಯೈರ್ದಶಮುಖಸಹಜಂ ಮಾನಯನ್ನಬ್ಧಿವಾಚಾ**
**ದೈತ್ಯಘ್ನಸ್ಸೇತುಕಾರೀ ರಿಪುಪುರರುದವೇದ್ವಾನರೈರ್ವೈರಿಘಾತೀ ॥ 7 ॥**

**ಅನ್ವಯಾರ್ಥ:** ಇಹ – ಮಾಲ್ಯವತ್ಪರ್ವತದ ಕಂದರದಲ್ಲಿ, ಮಾಸಾನ್ – ಕೆಲ ತಿಂಗಳುಗಳನ್ನು, ನೀತ್ವಾ– ಕಳೆದು, ಕಪೀಶಾನ್ – ಕಪಿಶ್ರೇಷ್ಠರನ್ನು, ದಶ – ಹತ್ತು, ಹರಿತಃ – ದಿಕ್ಕುಗಳಿಗೆ, ಪ್ರೇಷ್ಯ – ಕಳುಹಿಸಿ, ಸೀತಾಂ – ಸೀತಾದೇವಿಯನ್ನು, ವಿಚಿತ್ಯ – ಹುಡುಕಿ, ಆಯಾತಶ್ರೀಮದ್ಧನೂಮದ್ಗಿರಂ – ಆಯಾತ – ಬಂದಿರತಕ್ಕ, ಶ್ರೀಮತ್ – ಕಾಂತಿಸಂಪನ್ನರಾದ, ಹನೂಮತ್ – ಹನುಮಂತದೇವರ, ಗಿರಂ – ವಾಕ್ಯವನ್ನು, ಸಮನುಶ್ರುತ್ಯ – ಚೆನ್ನಾಗಿ ಆಲಿಸಿ, ಅಥ – ಅನಂತರದಲ್ಲಿ, ಸುಗ್ರೀವಾದ್ಯೈಃ – ಸುಗ್ರೀವನೇ ಮೊದಲಾದ, ಅಸಂಖ್ಯೈಃ – ಅಪರಿಮಿತರಾದ, ಕಪೀಂದ್ರೈಃ – ಕಪಿಶ್ರೇಷ್ಠರಿಂದ ಕೂಡಿ, ಗಚ್ಛನ್ – ದಕ್ಷಿಣ ದಿಕ್ಕಿಗೆ ದಿಗ್ವಿಜಯಮಾಡಿ, ದಶಮುಖಸಹಜಂ – ದಶಮುಖ – ರಾವಣನ, ಸಹಜಂ – ತಮ್ಮನಾದ ವಿಭೀಷಣನನ್ನು, ಮಾನಯಾನ್ – ಗೌರವಿಸಿ, ಅಬ್ಧಿವಾಚಾ – ಅಬ್ಧಿ – ಸಮುದ್ರರಾಜನ, ವಾಚಾ – ವಾಕ್ಯದಿಂದ, ದೈತ್ಯಘ್ನಃ – ದೈತ್ಯರುಗಳನ್ನು ಕೊಲ್ಲತಕ್ಕವನಾಗಿ, ಸೇತುಕಾರೀ – ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸತಕ್ಕವನಾಗಿ, ರಿಪುಪುರರುತ್– ರಿಪು – ಶತ್ರುವಾದ ರಾವಣನ, ಪುರ – ಪಟ್ಟಣವಾದ ಲಂಕೆಯನ್ನು, ರುತ್ – ಆಕ್ರಮಿಸಿ, ವಾನರೈಃ – ಕಪಿಗಳಿಂದ, ವೈರಿಘಾತೀ – ಶತ್ರುಗಳನ್ನು ಕೊಲ್ಲಿಸಿದ, ಅಸೌ – ಈ ರಾಮಚಂದ್ರ ದೇವರು, ಮಾಂ – ನನ್ನನ್ನು ಅವೇತ್ – ಕಾಪಾಡಲಿ ||

**ಕಥಾಭಿಪ್ರಾಯ:** ಶ್ರೀರಾಮನು ಮಾಲ್ಯವಂತದಲ್ಲಿ ನಾಲ್ಕು ಮಾಸಗಳನ್ನು ಕಳೆದನು. ಅನಂತರ ರಾಜ್ಯಭೋಗದಲ್ಲಿ ಮೈಮರೆತ ಸುಗ್ರೀವನು ಸೀತಾನ್ವೇಷಣ ವಿಷಯವನ್ನೇ ಮರೆತು ಕುಳಿತಿರಲು, ಅದರಿಂದ ಕೋಪಗೊಂಡ ರಾಮನು ಸುಗ್ರೀವನನ್ನು ಎಚ್ಚರಿಸಲು ಲಕ್ಷ್ಮಣನನ್ನು ಕಳುಹಿಸಿದನು. ಆ ವೇಳೆಗೆ ಹನುಮಂತನು ಸುಗ್ರೀವನಿಗೆ ಬುದ್ಧಿವಾದ ಹೇಳಿ ರಾಮನ ಬಳಿಗೆ ಕರತರುವ ಆದೇಶವನ್ನು ಹೇಳಲು ಸುಗ್ರೀವನು ಹನುಮಂತ ಮತ್ತು ಲಕ್ಷ್ಮಣರೊಡನೆ ರಾಮನಬಳಿ ಸಾರಿ ನಮಸ್ಕರಿಸಿ ಸೀತಾನ್ವೇಷಣ ಮಾಡಿಸುವುದಾಗಿ ವಿಜ್ಞಾಪಿಸಿ ದಿಕ್ಕುವಿದಿಕ್ಕುಗಳಲ್ಲಿದ್ದ ಕಪಿವೀರರನ್ನು ಕರೆಯಿಸಿ ಅವರನ್ನು ಸೀತಾಮಾತೆಯ ಅನ್ವೇಷಣಕ್ಕಾಗಿ ದಶದಿಕ್ಕುಗಳಿಗೂ ಕಳುಹಿಸಿದನು.

ಶ್ರೀರಾಮಚಂದ್ರನು ಸಂತಸಗೊಂಡು ಹನುಮಂತನನ್ನು ಕರೆದು ''ವಾಯುನಂದನ! ಈ ಕಾರ್ಯವನ್ನು ಮಾಡಲು ನೀನೇ ಸಮರ್ಥನು. ಇದಿಗೋ ನನ್ನೀ ಮುದ್ರೆಯುಂಗುರವನ್ನು ಸೀತೆಗೆ ಕೊಟ್ಟು ಅವಳಿಂದ ಏನಾದರೂ ಗುರುತು ತೆಗೆದುಕೊಂಡು ಬಾ'' ಎಂದು ಆಜ್ಞಾಪಿಸಿ ಅವನಿಗೆ ತನ್ನ ಅಂಗುಲೀಯಕವನ್ನು ಕೊಟ್ಟನು. ಹನುಮಂತನು ಶ್ರೀರಾಮನಿಗೆ ನಮಸ್ಕರಿಸಿ ಅವನ ಅಪ್ಪಣೆಯನ್ನು ಶಿರಸಾವಹಿಸಿ, ಅಂಗದಾದಿ ಕಪಿವೀರರೊಡನೆ ದಕ್ಷಿಣದಿಕ್ಕಿಗೆ ಪ್ರಯಾಣ ಬೆಳೆಸಿ ಮಹೇಂದ್ರ ಪರ್ವತಕ್ಕೆ ಬಂದು, ಅಂಗದಾದಿ ಕಪಿಶ್ರೇಷ್ಠರನ್ನು ಅಲ್ಲಿಯೇ ನಿಲ್ಲಿಸಿ, ಶತಯೋಜನ ವಿಸ್ತೀರ್ಣವಾದ ಮಹಾಸಮುದ್ರವನ್ನು ಲಂಘಿಸಿ, ಲಂಕಾಪಟ್ಟಣಕ್ಕೆ ಹೋಗಿ, ಅಲ್ಲಿ ಸೀತಾಮಾತೆಯನ್ನು ಹುಡುಕಿ, ಅಶೋಕವನದಲ್ಲಿ ವೃಕ್ಷದ ಬುಡದಲ್ಲಿ ಕುಳಿತಿದ್ದ ಸೀತಾಕೃತಿಯನ್ನು ಕಂಡು, ನಮಸ್ಕರಿಸಿ ಅವರಿಗೆ ಶ್ರೀರಾಮಲಕ್ಷ್ಮಣರ ಕುಶಲ ವಾರ್ತೆಯನ್ನರುಹಿ, ಶ್ರೀರಾಮನ ಮುದ್ರೆಯುಂಗುರವನ್ನು ಸಮರ್ಪಿಸಿ, ಅವರಿಂದ ಚೂಡಾಮಣಿಯನ್ನು ಸ್ವೀಕರಿಸಿ, ಅವರಿಗೆ ಸಮಾಧಾನ ಹೇಳಿ, ಅಶೋಕವನವನ್ನು ನಾಶಪಡಿಸಿ, ತನ್ನಮೇಲೆ ಯುದ್ಧಕ್ಕೆ ಬಂದ ಅನೇಕ ರಾಕ್ಷಸರನ್ನೂ, ಅಕ್ಷಕುಮಾರನನ್ನು ಸಂಹರಿಸಿ, ರಾವಣನಿಗೆ ಬುದ್ಧಿವಾದವನ್ನು ಹೇಳಿ, ಕುಪಿತನಾದ ರಾವಣನ ಆಜ್ಞೆಯಂತೆ ರಾಕ್ಷಸರು ಬಾಲಕ್ಕೆ ಬೆಂಕಿ ಹಚ್ಚಲು ಅದರಿಂದ ಲಂಕಾಪಟ್ಟಣವನ್ನು ಸುಟ್ಟು, ಪುನಃ ರತ್ನಾಕರವನ್ನು ಲಂಘಿಸಿ ಮಹೇಂದ್ರಪರ್ವತಕ್ಕೆ ಬಂದು, ಕಪಿವೀರರನ್ನು ಮುದಗೊಳಿಸಿ, ಅವರೊಡನೆ ಕಿಷ್ಕಿಂಧೆಗೆ ಆಗಮಿಸಿ ಶ್ರೀರಾಮದೇವರಿಗೆ ನಮಸ್ಕರಿಸಿ ಸೀತಾಮಾತೆಯ ಕುಶಲವಾರ್ತೆಯನ್ನು ಹೇಳಿ, ಅವರು ಕೊಟ್ಟಿದ್ದ ಚೂಡಾಮಣಿಯನ್ನು ಶ್ರೀರಾಮದೇವರಿಗೆ ಸಮರ್ಪಿಸಿ, ರಾವಣನ ಸಂಹಾರಮಾಡಿ ಸೀತಾಮಾತೆಯನ್ನು ಕರೆತರಬೇಕೆಂದು ವಿಜ್ಞಾಪಿಸಿದನು.

ಹನುಮಂತನ ಪ್ರಾರ್ಥನೆಯಂತೆ ಶ್ರೀರಾಮನು ವಾನರ ಸೇನೆಯೊಡನೆ ದಕ್ಷಿಣ ಸಮುದ್ರಕ್ಕೆ ಬಂದು ಬೀಡುಬಿಟ್ಟನು. ಅಲ್ಲಿಗೆ ಶ್ರೀರಾಮನ ಪಕ್ಷಪಾತಿಯೆಂದು ರಾವಣನಿಂದ ತ್ಯಕ್ತನಾದ ರಾವಣನ ತಮ್ಮನಾದ ವಿಭೀಷಣನು ಬಂದು ಶರಣಾಗತನಾಗಲು ಅವನನ್ನು ಸನ್ಮಾನಿಸಿ, ಸಮುದ್ರಾಭಿಮಾನಿಯಾದ ವರುಣದೇವನ ಪೂಜೆಯನ್ನು ಸ್ವೀಕರಿಸಿ, ಅವನ ಪ್ರಾರ್ಥನೆಯಂತೆ ಶ್ರೀರಾಮನು ಯುದ್ಧಕ್ಕೆ ಬಂದ ರಾಕ್ಷಸರನ್ನು ಸಂಹಾರಮಾಡಿದನು. ಅನಂತರ ಕಪಿವೀರರಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿ ಆ ಮಾರ್ಗವಾಗಿ ಲಂಕಾಪಟ್ಟಣಕ್ಕೆ ಹೋಗಿ ಲಂಕೆಯನ್ನು ಮುತ್ತಿ ಯುದ್ಧದಲ್ಲಿ ಶ್ರೀರಾಮನು ವಾನನರಿಂದ ರಾಕ್ಷಸರನ್ನು ಸಂಹಾರ ಮಾಡಿಸಿದನು – ಇತ್ಯಾದಿ ಕಥೆಯು ಈ ಪದ್ಯದಿಂದ ಸೂಚಿತವಾಗುವುದು.

ಇಂಥ ಶ್ರೀರಾಮನು ನಮ್ಮನ್ನು ರಕ್ಷಿಸಲಿ.

**ವಿಗ್ರಹ :** ಕಪೀನಾಮೀಶಾಃ ತಾನ್ ॥ ಶ್ರೀಃ ಅಸ್ಯಾಸ್ತೀತಿ ಶ್ರೀಮಾನ್, ಸ ಚಾಸೌ ಹನುಮಾಂಶ್ಚ ಶ್ರೀಮದ್ಧನೂಮಾನ್, ಆಯಾತಶ್ಚಾಸೌ, ಶ್ರೀಮದ್ಧನೂಮಾಂಶ್ಚ – ಅಯಾತಶ್ರೀಮದ್ಧನೂಮಾನ್, ತಸ್ಯ ಗೀಃ, ತಾಂ, ಆಯಾತಶ್ರೀಮದ್ಧನೂಮದ್ಗಿರಮ್ ॥ ಕಪೀನಾಮಿಂದ್ರಾಃ ಕಪೀಂದ್ರಾಃ ತೈಃ ॥ ಸುಗ್ರೀವಃ ಆದ್ಯಃ ಏಷಾಂ ತೇ, ಸುಗ್ರೀವಾದ್ಯಾಃ, ತೈಃ ॥ ನ ವಿದ್ಯತೆ ಸಂಖ್ಯಾ ಏಷಾಂ ತೇ ಅಸಂಖ್ಯಾಃ, ತೈಃ ॥ ದಶ ಮುಖಾನಿ ಯಸ್ಯ ಸಃ ದಶಮುಖಃ, ತಸ್ಯ ಸಹಜಃ, ತಂ– ದಶಮುಖಸಹಜಮ್ ॥ ಮಾನಯತೀತಿ ಮಾನಯನ್ ॥ ಅಬ್ಧೇಃವಾಕ್ ಅಬ್ಧಿವಾಕ್, ತಯಾ ॥ ದೈತ್ಯಾನ್ ಹಂತೀತಿ ದೈತ್ಯಘ್ನಃ ॥ ಸೇತುಂ ಕರೋತೀತಿ ಸೇತುಕಾರೀ ॥ ರಿಪೂಣಾಂ ಪುರಂ ರಿಪುಪುರಂ, ತತ್ ರುಣದ್ಧೀತಿ ರಿಪುಪುರರುತ್ ॥ ವಾನಂ ರಾತೀತಿ ವಾನರಾಃ, ತೈಃ ॥ ವೈರೀನ್ ಘಾತಯತೀತಿ ವೈರಿಘಾತೀ ॥ 7 ॥

**ಭಗ್ನಮಿತಿ ॥**

**ಭಗ್ನಂ ಕೃತ್ವಾ ದಶಾಸ್ಯಂ ಗುರುತರವಪುಷಂ ಕುಂಭಕರ್ಣಂ ನಿಗೃಹ್ಯ**
**ಪ್ರಧ್ವಸ್ತಾಶೇಷನಾಗಂ ಪದಕಮಲನತಂ ತಾರ್ಕ್ಷ್ಯಮಾನಂದ್ಯ ರಾಮಃ ।**
**ಸರ್ವಾನುಜ್ಜೀವಯಂತಂ ಗಿರಿಧರಮನಘಶ್ಚಾಂಜನೇಯಂ ಕಪೀನ್ ಸ್ವಾನ್**
**ವಿಜ್ಞಾನಾಸ್ತ್ರೇಣ ರಕ್ಷನ್ ಸಮವತು ದಮಯನ್ ಲಕ್ಷ್ಮಣಾಚ್ಛಕ್ರಶತ್ರುಮ್ ॥ 8 ॥**

**ಅನ್ವಯಾರ್ಥ:** ದಶಾಸ್ಯಂ – ರಾವಣನನ್ನು, ಭಗ್ನಂ – ಪರಾಜಿತನನ್ನಾಗಿ, ಕೃತ್ವಾ – ಮಾಡಿ, ಗುರುತರವಪುಷಂ – ಗುರುತರ– ಅತಿ ದೊಡ್ಡದಾದ, ವಪುಷಂ – ಶರೀರಿಯಾದ, ಕುಂಭಕರ್ಣಂ – ಕುಂಭಕರ್ಣನನ್ನು, ನಿಗೃಹ್ಯ – ಸಂಹರಿಸಿ, ಪ್ರಧ್ವಸ್ತಾಶೇಷನಾಗಂ – ಪ್ರಧ್ವಸ್ತ – ಸಂಹರಿಸಲ್ಪಟ್ಟ, ಅಶೇಷ – ಸಮಸ್ತವಾದ, ನಾಗಂ – ಸರ್ಪವುಳ್ಳ, ಪದಕಮಲನತಂ – ಪದಕಮಲ – ಪಾದಕಮಲದಲ್ಲಿ, ನತಂ – ನಮಸ್ಕರಿಸಿದಂಥಾ, ತಾರ್ಕ್ಷ್ಯಂ – ಗರುಡನನ್ನು, ಆನಂದ್ಯ – ಸಂತೋಷಪಡಿಸಿ, ಸರ್ವಾನ್ – ಸಮಸ್ತ ಕಪಿಗಳನ್ನು, ಉಜ್ಜೀವಯಂತಂ – ಬದುಕಿಸತಕ್ಕ, ಗಿರಿಧರಂ – ಗಂಧಮಾದನಪರ್ವತವನ್ನು ತಂದ, ಆಂಜನೇಯಂ– ಹನೂಮಂತದೇವರನ್ನು, ಆನಂದ್ಯ– ಸಂತೋಷಪಡಿಸಿ, ಸ್ವಾನ್ – ಸ್ವಕೀಯರಾದ, ಕಪೀನ್– ಕಪಿಗಳನ್ನು, ವಿಜ್ಞಾನಾಸ್ತ್ರೇಣ – ವಿಜ್ಞಾನಾಸ್ತ್ರದಿಂದ, ರಕ್ಷನ್ – ಕಾಪಾಡಿ, ಲಕ್ಷ್ಮಣಾತ್ – ಲಕ್ಷ್ಮಣನಿಂದ, ಶಕ್ರಶತ್ರುಂ – ಇಂದ್ರಜಿತುವನ್ನು, ದಮಯನ್ – ಸಂಹಾರಮಾಡಿಸಿದ, ಅನಘಃ – ಬಂಧನಾದಿರಹಿತನಾದ, ರಾಮಃ – ಶ್ರೀರಾಮಚಂದ್ರದೇವರು, ಸಮವತು – ರಕ್ಷಣಮಾಡಲಿ ॥

**ಕಥಾಭಿಪ್ರಾಯ:** ಕಪಿವೀರರು ರಾವಣನ ಸೈನ್ಯದೊಡನೆ ಕಾದಾಡುತ್ತಿರುವಾಗ ರಾವಣನು ರಾಮನ ಮೇಲೆ ಯುದ್ಧಕ್ಕಾಗಿ ಬಂದನು. ರಾಮನು ರಾವಣನನ್ನು ಸೋಲಿಸಿ ''ರಾಕ್ಷಸೇಂದ್ರ! ಜೀವದ ಮೇಲಿನ ಆಶೆಯನ್ನು ತೊರೆದು, ಸಕಲಭೋಗಗಳನ್ನೂ ಅನುಭವಿಸಿ ನಾಳೆ ಪುನಃ ಯುದ್ಧಕ್ಕೆ ಬಾ'' ಎಂದು ರಾವಣನಿಗೆ ಹೇಳಿದನು. ರಾವಣನು ಲಜ್ಜೆಯಿಂದ ಅರಮನೆಗೆ ಹಿಂದಿರುಗಿ ಬಹುಕಾಲದಿಂದ ನಿದ್ರಿಸುತ್ತಿದ್ದ ತಮ್ಮನಾದ ಕುಂಭಕರ್ಣನನ್ನು ಎಬ್ಬಿಸಿ, ರಾಮನಮೇಲೆ ಯುದ್ಧಮಾಡಲು ಪ್ರಚೋದಿಸಿ ಕಳುಹಿಸಿದನು. ಮಹಾಕಾಯನಾದ ಕುಂಭಕರ್ಣನು ರಾಮನ ಮೇಲೆ ಯುದ್ಧಕ್ಕೆ ಬಂದನು. ಶ್ರೀರಾಮನು ಯುದ್ಧದಲ್ಲಿ ಕುಂಭಕರ್ಣನನ್ನು ಸಂಹಾರ ಮಾಡಿದನು. ಇದನ್ನು ತಿಳಿದು ರಾವಣನು ತನ್ನ ಪುತ್ರನಾದ ಮೇಘನಾದನನ್ನು (ಇಂದ್ರಜಿತ್) ಯುದ್ಧಕ್ಕೆ ಕಳಿಸಿದನು.

ಇಂದ್ರಜಿತವು ಯುದ್ಧದಲ್ಲಿ ನಾಗಪಾಶದಿಂದ ಕಪಿವೀರರನ್ನು ಬಂಧಿಸಿದನು. ಆಗ ಶ್ರೀರಾಮನ ಸೇವೆಗಾಗಿ ಬಂದ ಗರುಡನು ನಾಗಪಾಶದಿಂದ ಕಪಿವೀರರನ್ನು ಮುಕ್ತಗೊಳಿಸಿ ಶ್ರೀರಾಮನಿಗೆ ನಮಿಸಿದನು. ರಾಮನು ಗರುಡನನ್ನು ಸಂತೋಷಪಡಿಸಿ ಕಳಿಸಿದನು. ಇದನ್ನು ಕಂಡು ಇಂದ್ರಜಿತುವು ಮತ್ತೆ ನಾಗಪಾಶದಿಂದ ಕಪಿವೀರರನ್ನು ಬಂಧಿಸಿದನು. ಆಗ ರಾಮನು ಆಂಜನೇಯನಿಂದ ಗಂಧಮಾದನ ಪರ್ವತವನ್ನು ತರಿಸಿ, ಅದರಲ್ಲಿದ್ದ ದಿವ್ಯೌಷಧಗಳಿಂದ ಮತ್ತೆ ಕಪಿವೀರರನ್ನು ಉಜ್ಜೀವನಗೊಳಿಸಿ ಹನುಮಂತನನ್ನು ಆನಂದಗೊಳಿಸಿದನು. ಇಂದ್ರಜಿತುವು ಮೂರನೇಬಾರಿ ನಾಗಪಾಶದಿಂದ ಕಪಿ-ವೀರರನ್ನು ಬಂಧಿಸಲು ಶ್ರೀರಾಮನು ವಿಜ್ಞಾನಾಸ್ತ್ರಪ್ರಯೋಗದಿಂದ ತನ್ನವರಾದ ಕಪಿವೀರರನ್ನು ರಕ್ಷಿಸಿ, ಲಕ್ಷ್ಮಣನಿಂದ ಇಂದ್ರಜಿತುವನ್ನು ಸಂಹಾರಮಾಡಿಸಿದನು ಇತ್ಯಾದಿ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

ಇಂತು ಬಂಧನಾದಿ ರಹಿತನಾದ ಶ್ರೀರಾಮಚಂದ್ರದೇವರು ನಮ್ಮನ್ನು ಕಾಪಾಡಲಿ ಎಂದು ಶ್ರೀಗುರುರಾಜರು ಪ್ರಾರ್ಥಿಸಿದ್ದಾರೆ.

**ವಿಗ್ರಹ:** ಅತ್ಯಂತಂ ಗುರು ಗುರುತರಂ, ಗುರುತರಂ ವಪುಃ, ಯಸ್ಯ ಸಃ ಗುರುತರವಪುಃ, ತಮ್ ॥ ಕುಂಭಾವಿವ ಕರ್ಣೌ ಯಸ್ಯ ಸಃ ಕುಂಭಕರ್ಣಃ, ತಮ್ ॥ ಅಶೇಷಾಶ್ಚ ತೇ ನಾಗಾಶ್ಚ ಅಶೇಷನಾಗಾಃ, ಪ್ರಧ್ವಸ್ತಾಃ ಅಶೇಷನಾಗಾಃ ಯೇನ ಸಃ ಪ್ರಧ್ವಸ್ತಾಶೇಷನಾಗಃ, ತಮ್ ॥ ಪದೌ ಕಮಲೇ, ಇವ ಪದಕಮಲೇ, ತಯೋಃ ನತಃ ಪದಕಮಲನತಃ, ತಮ್ ॥ ಗಿರಿಂ ಧರತೀತಿ ಗಿರಿಧರಃ, ತಮ್ ॥ ಅಂಜನಾಯಾಃ ಅಪತ್ಯಂ ಪುಮಾನ್ ಆಂಜನೇಯಃ, ತಮ್ ॥ ವಿಜ್ಞಾನಂ ಚ ತತ್ ಅಸ್ತ್ರಂ ಚ ವಿಜ್ಞಾನಾಸ್ತ್ರಂ, ತೇನ ॥ ಶಕ್ರಸ್ಯ ಶತ್ರುಃ ಶಕ್ರಶತ್ರುಃ, ತಮ್ ॥

**ಅಲಂಕಾರಗಳು:** ಇಲ್ಲಿಯೂ 'ಉಪಮಾ' ಮತ್ತು 'ಕಾವ್ಯಲಿಂಗ' 'ಉದಾತ್ತ' ಮುಂತಾದ ಅಲಂಕಾರಗಳಿವೆ.

**ಉಪಮಾಲಂಕಾರ ಲಕ್ಷಣ:** 'ಉಪಮಾ ಸಾಮ್ಯನಿಷ್ಪತ್ತಿರುಭಯೋರನುರೂಪಯೋಃ ॥' **ದೃಷ್ಟಾಂತ:** 'ವಿಭಾತಿ ವಿಜಯೀಂದ್ರೋಽಯಂ ಕಲಾಭಿಶ್ಚಂದ್ರಮಾ ಇವ ॥' –ಅಲಂಕಾರಮಂಜರೀ.

ಕ್ರವ್ಯಾದಾನಿತಿ ॥

**ಕ್ರವ್ಯಾದಾನ್ ಘ್ನನ್ನಸಂಖ್ಯಾನಪಿ ದಶವದನಂ ಬ್ರಹ್ಮಪೂರ್ವೈಸ್ಸುರೇಶೈಃ**
**ಪುಷ್ಪೈರಾಕೀರ್ಯಮಾಣೋ ಹುತವಹವಿಮಲಾಮಾಪ್ಯ ಸೀತಾಂ ವಿಧಾಯ ।**
**ರಕ್ಷೋನಾಥಂ ಸ್ವಭಕ್ತಂ ಸ್ವಪುರಮಥಗತಃ ಪುಷ್ಪಕಸ್ಥಸ್ಸಮಸ್ತೈಃ**
**ಸಾಮ್ರಾಜ್ಯೇ ಚಾಭಿಷಿಕ್ತೋ ನಿಜಜನಮಖಿಲಂ ಮಾನಯನ್ಮೇ ಗತಿಃ ಸ್ಯಾತ್ ॥ 9 ॥**

**ಅನ್ವಯಾರ್ಥ:** ಅಸಂಖ್ಯಾನ್ – ಅಪರಿಮಿತರಾದ, ಕ್ರವ್ಯಾದಾನ್ – ರಾಕ್ಷಸರನ್ನು, ಘ್ನನ್ – ಸಂಹರಿಸಿ, ದಶವದನ–ಮಪಿ– ರಾವಣನನ್ನೂ ಸಹ, ಘ್ನನ್ – ಸಂಹಾರಮಾಡಿ, ಬ್ರಹ್ಮಪೂರ್ವೈಃ– ಚತುರ್ಮುಖನೇ ಮೊದಲಾದ, ಸುರೇಶೈಃ– ದೇವತಾಶ್ರೇಷ್ಠರಿಂದ, ಪುಷ್ಪೈಃ – ಕುಸುಮಗಳಿಂದ, ಆಕೀರ್ಯಮಾಣಃ – ಅಭಿಷೇಕ ಮಾಡಿಸಿಕೊಳ್ಳಲ್ಪಟ್ಟವನಾಗಿ, ಹುತವಹವಿಮಲಾಂ – ಹುತವಹ – ಅಗ್ನಿಯಿಂದ, ವಿಮಲಾಂ – ನಿರ್ಮಲಳಾದ, ಸೀತಾಂ – ಸೀತಾದೇವಿಯನ್ನು, ಆಪ್ಯ – ಹೋಂದಿ, ಸ್ವಭಕ್ತಂ – ತನ್ನ ಭಕ್ತನಾದ ವಿಭಿಷಣನನ್ನು, ರಕ್ಷೋನಾಥಂ–ರಾಕ್ಷಸರ ಸ್ವಾಮಿಯನ್ನಾಗಿ (ಲಂಕಾಧಿಪತಿ–ಯನ್ನಾಗಿ), ವಿಧಾಯ– ಮಾಡಿ, ಅಥ– ಅನಂತರದಲ್ಲಿ, ಸಮಸ್ತಃ– ಸಕಲರಾದ ತನ್ನ ಜನರೊಡನೆ, ಪುಷ್ಪಕಸ್ಥಃ – ಪುಷ್ಪಕವಿಮಾನಾರೂಢನಾಗಿ, ಸ್ವಪುರಂ – ತನ್ನದಾದ ಅಯೋಧ್ಯಾಪಟ್ಟಣವನ್ನು, ಗತಃ – ಹೊಂದಿದವನಾಗಿ, ಸಾಮ್ರಾಜ್ಯೇ – ರಾಜ್ಯದಲ್ಲಿ, ಅಭಿಷಿಕ್ತಃ – ಪಟ್ಟಾಭಿಷಿಕ್ತನಾಗಿ, ಅಖಿಲಂ – ಸಮಸ್ತರಾದ, ನಿಜಜನಂ – ಸ್ವಕೀಯರನ್ನು, ಮಾನಯನ್ – ಗೌರವಿಸಿದ, ರಾಮಃ – ಶ್ರೀರಾಮಚಂದ್ರನು, ಮೇ – ನನಗೆ, ಗತಿಃ – ಸರ್ವಾಭೀಷ್ಟಪ್ರದನು, ಸ್ಯಾತ್ – ಆಗಲಿ.

**ಕಥಾಭಿಪ್ರಾಯ:** ಶ್ರೀರಾಮಚಂದ್ರನು ಇಂದ್ರಜಿತುವಿನ ಸಂಹಾರಾನಂತರದಲ್ಲಿ ರಾವಣನು ಕಳುಹಿಸಿದ ಸಮಸ್ತ ಸೇನೆಗಳನ್ನೂ ಸಂಹರಿಸಿ, ಅನಂತರ ರಾವಣನನ್ನೂ ಸಂಹಾರ ಮಾಡಿದನು. ರಾವಣಾಸುರನ ವಧದಿಂದ ಸಂತುಷ್ಟರಾದ ಬ್ರಹ್ಮಾದಿದೇವತೆಗಳು ಶ್ರೀರಾಮನ ಮೇಲೆ ಪುಷ್ಪವೃಷ್ಟಿಮಾಡಿದರು.

ತರುವಾಯ ಅಶೋಕವನದ ತರುಮೂಲದಲ್ಲಿದ್ದ ಸೀತಾಕೃತಿಯನ್ನು ಕರೆತರಿಸಿ ಸೀತಾದೇವಿಯ ಪಾತಿವ್ರತ್ಯದ ಮಹಿಮೆಯನ್ನು ಜಗತ್ತಿನಲ್ಲಿ ಬೆಳಗಿಸಲೋಸುಗ ಅಗ್ನಿಪ್ರವೇಶಮಾಡುವಂತೆ ಸೀತಾಕೃತಿಗೆ ಆಜ್ಞಾಪಿಸಿ ಅಗ್ನಿಯಲ್ಲಿ ಆ ಸೀತಾಕೃತಿಯನ್ನು ನಾಶಪಡಿಸಿ, ಕೈಲಾಸದಿಂದ ಬಂದ ಸೀತಾದೇವಿಯನ್ನು ಅಗ್ನಿದೇವನು ಕರತಂದು ಸಮರ್ಪಿಸಲು ಅವಳನ್ನು ಸ್ವೀಕರಿಸಿ, ಭಕ್ತನಾದ ವಿಭೀಷಣನನ್ನು ರಾಕ್ಷಸೇಶ್ವರನನ್ನಾಗಿಮಾಡಿ ಅವನಿಗೆ ಲಂಕಾರಾಜ್ಯದಲ್ಲಿ ಪಟ್ಟಾಭಿಷೇಕಮಾಡಿಸಿ ಅನುಗ್ರಹಿಸಿ ಸಕಲರೊಡನೆ ಪುಷ್ಪಕ ವಿಮಾನವನ್ನೇರಿ ಅಯೋಧ್ಯೆಗೆ ಬಂದು ವಸಿಷ್ಠಾದಿ ಋಷಿಗಳಿಂದ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ತನ್ನವರಾದ ಸಕಲರನ್ನೂ ಸನ್ಮಾನಿಸಿ ಆನಂದಪಡಿಸಿ ಜಗನ್ಮಾತೆಯಾದ ಶ್ರೀಜಾನಕೀದೇವಿಯೊಡನೆ ಸುಖವಾಗಿ ವಾಸಮಾಡಹತ್ತಿದನು–ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

ಇಂಥ ಶ್ರೀರಾಮಚಂದ್ರನು ನಮಗೆ ಸರ್ವಾಭೀಷ್ಟಗಳನ್ನು ಕರುಣಿಸಲಿ ಎಂದು ಶ್ರೀಗುರುರಾಜರು ಪ್ರಾರ್ಥಿಸಿದ್ದಾರೆ.

**ವಿಗ್ರಹ:** ನ ವಿದ್ಯತೇ ಸಂಖ್ಯಾ ಏಷಾಂ ತೇ ಅಸಂಖ್ಯಾಃ, ತಾನ್ ॥ ಬ್ರಹ್ಮಾ ಪೂರ್ವಾ ಏಷಾಂ ತೇ ಬ್ರಹ್ಮಪೂರ್ವಾಃ, ತೈಃ ॥ ಸುರಾಣಾಮೀಶಾಃ, ತೈಃ ॥ ವಹತೀತಿ ವಹಃ, ಹುತಸ್ಯ ವಹಃ ಹುತವಹಃ, ಹುತವಹೇನ ವಿಮಲಾ ಹುತವಹ–ವಿಮಲಾ, ತಾಮ್ ॥ ಸ್ವಸ್ಯ ಭಕ್ತಃ ತಮ್ ॥ ಸ್ವಸ್ಯ ಪುರಂ ಸ್ವಪುರಂ, ತತ್ ॥ ಪುಷ್ಪೈಃ ಕಾಯತೀತಿ ಪುಷ್ಪಕಂ ತಸ್ಮಿನ್ ತಿಷ್ಠತೀತಿ ಪುಷ್ಪಕಸ್ಥಃ ॥ ನಿಜಶ್ಚಾಸೌ ಜನಶ್ಚ ನಿಜಜನಃ, ತಮ್ ॥

**ಅಲಂಕಾರ:** ಇಲ್ಲಿಯೂ 'ಉಪಮಾ, ಕಾವ್ಯಲಿಂಗ ಮತ್ತು ಉದಾತ್ತಾದಿ ಅಲಂಕಾರಗಳಿವೆ. ॥ 9 ॥

**ರಕ್ಷನ್ನಿತಿ ॥**

**ರಕ್ಷನ್ ಕ್ಷೋಣೀಂ ಸಮೃದ್ಧಾಂ ನುತ ಉತ ಮುನಿಭಿರ್ಮಾನಯನ್ವಾಯುಸೂನುಂ**
**ಪ್ರೇಷ್ಯಾದಿತ್ಯಾತ್ಮಜಾದೀನ್ ವ್ಯತನುತ ಭರತಂ ಯೌವರಾಜ್ಯೇಽನುಮಾನ್ಯ ।**

**ಕಾರ್ಯೇ ಸೌಮಿತ್ರಿಮಾರ್ತಶ್ವಗದಿತಕೃದರಿಘ್ನೋಽಥ ಶತ್ರುಘ್ನತೋ ಯೋ**
**ಹತ್ವಾಽಸೌ ದುಷ್ಟಶೂದ್ರಂ ದ್ವಿಜಸುತಗುಬವೇತ್ಕುಂಭಜಾನ್ಮಾಲಭಾರೀ ॥ 10 ॥**

**ಅನ್ವಯಾರ್ಥ:** ಸಮೃದ್ಧಾಂ- ಸಕಲ ಕಾಮಗಳಿಂದ ಪರಿಪೂರ್ಣವಾದ, ಕ್ಷೋಣೀಂ- ಪೃಥ್ವಿಯನ್ನು, ರಕ್ಷನ್-ಪಾಲನಮಾಡಿ, ಉತ- ಅನಂತರದಲ್ಲಿ, ಮುನಿಭಿಃ - ಅಗಸ್ತ್ಯಾದಿ ಮುನಿಗಳಿಂದ, ನುತಃ- ಸ್ತುತನಾಗಿ, ವಾಯುಸೂನುಂ - ಪವನನಂದನನಾದ ಹನುಮಂತನನ್ನು, ಮಾನಯನ್ - ಗೌರವಿಸಿ, ಆದಿತ್ಯಾತ್ಮಜಾದೀನ್ - ಆದಿತ್ಯಾತ್ಮಜ - ಸೂರ್ಯ-ಕುಮಾರನಾದ ಸುಗ್ರೀವನೇ, ಆದಿ - ಮೊದಲಾಗುಳ್ಳವರನ್ನು, ಪ್ರೇಷ್ಯ - ಕಳುಹಿಸಿ, ಯೌವರಾಜ್ಯೇ- ಯುವರಾಜಪದದಲ್ಲಿ, ಭರತಂ- ಭರತನನ್ನು, ವ್ಯತನುತ- ಪಟ್ಟಕಟ್ಟಿದನೋ (ಮಾಡಿದನೋ), ಕಾರ್ಯೇ- ನಗರ ಮತ್ತು ಗ್ರಾಮಗಳಲ್ಲಿರುವ ಪ್ರಜೆಗಳ ರಕ್ಷಣಾದಿ ಕಾರ್ಯಕ್ಕೆ, ಸೌಮಿತ್ರಿಂ - ಸುಮಿತ್ರಾತನಯನಾದ ಲಕ್ಷ್ಮಣನನ್ನು ಅನುಮಾನ್ಯ- ಅಪ್ಪಣೆಯಿತ್ತು (ನಿಯಮಿಸಿ), ಆರ್ತಶ್ವಗದಿತಕೃತ್ - ಆರ್ತ - ದುಃಖದಿಂದ ಕೂಡಿದ, ಶ್ವ- ಶ್ವಾನದಿಂದ, ಗದಿತಂ- ಹೇಳಲ್ಪಟ್ಟದ್ದನ್ನು, ಕೃತ್ - ಮಾಡಿದವನಾಗಿ, ಅಥ- ಅನಂತರದಲ್ಲಿ, ಶತ್ರುಘ್ನತಃ ಶತ್ರುಘ್ನನಿಂದ, ಅರಿಘ್ನಃ - ಶತ್ರುವಾದ ಲವಣಾಸುರನನ್ನು ಸಂಹಾರಮಾಡಿಸಿ, ದುಷ್ಟಶೂದ್ರಂ - ದುಷ್ಟನಾದ ಶೂದ್ರನನ್ನು, ಹತ್ವಾ - ಸಂಹರಿಸಿ, ದ್ವಿಜಸುತಗುಪ್ - ದ್ವಿಜ - ಬ್ರಾಹ್ಮಣನ, ಸುತ-ಮಗನನ್ನು, ಗುಪ್ - ರಕ್ಷಣಮಾಡಿ, ಕುಂಭಜಾತ್ - ಅಗಸ್ತರಿಂದ, ಮಾಲಭಾರೀ - ಮಾಲೆಯನ್ನು ಸ್ವೀಕಾರ ಮಾಡಿದ, ಅಸೌ - ಶ್ರೀರಾಮಚಂದ್ರದೇವನು, ಅವೇತ್ - ಕಾಪಾಡಲಿ ॥

**ಕಥಾಭಿಪ್ರಾಯ:** ಶ್ರೀರಾಮಚಂದ್ರದೇವನು ಪಟ್ಟಾಭಿಷೇಕವಾದ ಮೇಲೆ ಸಕಲಸಂಪತ್ತು ಕಾಮಗಳಿಂದ ಪೂರ್ಣವಾದ ವಸುಧೆಯನ್ನು ರಕ್ಷಣೆ ಮಾಡುತ್ತಾ ಅಗಸ್ತ್ಯರೇ ಮೊದಲಾದ ಋಷಿಗಳಿಂದ ಸ್ತುತ್ಯನಾಗಿ, ಶ್ರೀ ಹನುಮಂತದೇವರಿಗೆ ತನ್ನ ಕಂಠದಲ್ಲಿದ್ದ ರತ್ನಮಾಲೆಯನ್ನು ಕೊಟ್ಟು, ತನ್ನ ಪ್ರೇಮಾಲಿಂಗನದಿಂದ ಅವರಿಗೆ ಮುಂದಿನ ಬ್ರಹ್ಮಪಟ್ಟವನ್ನು ಅನುಗ್ರಹಿಸಿ, ಸುಗ್ರೀವನೇ ಮೊದಲಾದವರನ್ನು ಅವರವರ ರಾಜ್ಯಪಾಲನೆಗಾಗಿ ಕಳುಹಿಸಿ ಕೊಟ್ಟು, ಭರತನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ, ಲಕ್ಷ್ಮಣನನ್ನು ನಗರ-ಗ್ರಾಮಜನರ ರಕ್ಷಣೆಗಾಗಿ ನಿಯಮಿಸಿದನು.

ಹೀಗಿರಲೊಂದುದಿನ ಸನ್ಯಾಸಿಯ ದಂಡಪ್ರಹಾರದಿಂದ ನೊಂದ ಶ್ವಾನವೊಂದು ಬಂದು ಶ್ರೀರಾಮನಲ್ಲಿ ದೂರಿಟ್ಟು ಸನ್ಯಾಸಿಯನ್ನು ಶಿಕ್ಷಿಸಬೇಕೆಂದು ಪ್ರಾರ್ಥಿಸಿತು. ಅದರ ಮಾತಿನಂತೆ ಸನ್ಯಾಸಿಯ ವಿಚಾರಣೆಯನ್ನು ನಡೆಸಿ, ಅಪರಾಧಿಯಾದ ಆ ಭಿಕ್ಷುವಿಗೆ ಕಾಲಾಂಜಲವೆಂಬ ದೇವಾಲಯದ ಅಧಿಕಾರವನ್ನು ಕೊಟ್ಟನು. ಅನಂತರ ಲವಣಾಸುರನಿಂದ ಪೀಡಿತರಾದ ಚ್ಯವನ ಮುಂತಾದ ಮುನಿಗಳು ಬಂದು ದೈತ್ಯಸಂಹಾರಕ್ಕಾಗಿ ಪ್ರಾರ್ಥನೆ ಮಾಡಲು ಅವರ ಅಪೇಕ್ಷೆಯಂತೆ ಮಧುನಾಮಕ ದೈತ್ಯನ ಮಗನಾದ, ಮಧುವನದಲ್ಲಿದ್ದ ಲವಣಾಸುರನನ್ನು ಶತ್ರುಘ್ನನಿಂದ ಸಂಹಾರ ಮಾಡಿಸಿದನು.

ಒಮ್ಮೆ ರುದ್ರಪದ ಪ್ರಾಪ್ತಿಗಾಗಿ ಜಂಘನೆಂಬ ಅಸುರನು ಶಂಭೂಕನೆಂಬ ಶೂದ್ರರೂಪದಿಂದ ತಲೆಕೆಳಗಾಗಿ ತಪಸ್ಸು ಮಾಡುತ್ತಿರಲು ಶ್ರೀರಾಮನು ಅವನನ್ನು ಸಂಹರಿಸಿ ಅವನ ಅಪರಾಧದಿಂದ ಮೃತನಾದ ಬ್ರಾಹ್ಮಣ ಕುಮಾರನನ್ನು ಬದುಕಿಸಿದನು.

ಮತ್ತೊಮ್ಮೆ ಅನ್ನದಾನವಿಲ್ಲದೆ ಶ್ವೇತನೆಂಬ ರಾಜನು ಯಜ್ಞ ಮಾಡುತ್ತಿರಲು ಅಲ್ಲಿಗೆ ಬಂದ ಅಗಸ್ತ್ಯರು ತಮ್ಮ ಕ್ಷುದ್ಬಾಧೆಯನ್ನು ಪರಿಹರಿಸಬೇಕೆಂದು ಕೇಳಲು ಆಗ ಶ್ವೇತರಾಜನು ಹಿಂದೆ ಚತುರ್ಮುಖರು ತನಗೆ, ಮುಂದೆ ಅದನ್ನು ಶ್ರೀರಾಮನಿಗೆ ತಲುಪಿಸಬೇಕೆಂದು ಹೇಳಿಕೊಟ್ಟಿದ್ದ ಮಾಲೆಯನ್ನು ಅಗಸ್ತ್ಯರಿಗೆ ಕೊಟ್ಟು ನಿಮ್ಮ ಕಾರ್ಯವಾದಮೇಲೆ ಇದನ್ನು

ಶ್ರೀರಾಮಚಂದ್ರನಿಗೆ ಸಮರ್ಪಿಸಬೇಕು ಎಂದು ವಿಜ್ಞಾಪಿಸಿದನು. ಶ್ರೀರಾಮನು ಅಗಸ್ತ್ಯಾಶ್ರಮಕ್ಕೆ ಹೋಗಿ ಅವರ ಆಥಿತ್ಯವನ್ನು ಸ್ವೀಕರಿಸಿ ಅವರು ಬ್ರಹ್ಮದೇವರ ಆದೇಶದಂತೆ ಶ್ವೇತರಾಜನು ರಾಮನಿಗೆ ತಲುಪಿಸಲು ಕೊಟ್ಟಿದ್ದ ಆ ಮಾಲೆಯನ್ನು ಶ್ರೀರಾಮಚಂದ್ರನಿಗೆ ಸಮರ್ಪಿಸಿದನು. ಶ್ರೀರಾಮನು ಆ ಮಾಲೆಯನ್ನು ಪರಮಾನಂದದಿಂದ ಸ್ವೀಕರಿಸಿದನು ಮುಂತಾದ ಕಥೆಯು ಈ ಪದ್ಯದಿಂದ ಸೂಚಿತವಾಗುವುದು. ಇಂಥ ಶ್ರೀರಾಮನು ನಮ್ಮನ್ನು ರಕ್ಷಿಸಲಿ.

**ವಿಗ್ರಹ:** ವಾಯೋಃ ಸೂನುಃ ವಾಯುಸೂನುಃ, ತಮ್ ॥ ಆತ್ಮನಃ ಜಾಯತ ಇತಿ ಆತ್ಮಜಃ, ಅದಿತೇಃ ಅಪತ್ಯಂ ಪುಮಾನ್ ಆದಿತ್ಯಃ, ಆದಿತ್ಯಸ್ಯ ಆತ್ಮಜಃ ಆದಿತ್ಯಾತ್ಮಜಃ, ಆದಿತ್ಯಾತ್ಮಜಃ ಆದಿಃ ಏಷಾಂ ತೇ ಆದಿತ್ಯಾತ್ಮಜಾದಯಃ, ತಾನ್ ॥ ಬಿಭರ್ತೀತಿ ಭರತಃ, ತಮ್ ॥ ಯುವರಾಜಸ್ಯ ಭಾವಃ ಯೌವ್ವರಾಜ್ಯಂ, ತಸ್ಮಿನ್ ॥ ಸುಮಿತ್ರಾಯಾಃ ಅಪತ್ಯಂ ಪುಮಾನ್ ಸೌಮಿತ್ರಿಃ, ತಮ್ ॥ ಶ್ವಯತೀತಿ ಶ್ವಾ ಆರ್ತಶ್ವಾಸೌ ಶ್ವಾಚ ಅರ್ತಶ್ವಾ, ಆರ್ತಶುನಾ ಗದಿತಂ ಆರ್ತಶ್ವಗದಿತಂ, ತತ್ ಕರೋತೀತಿ ಆರ್ತಶ್ವಗದಿತಕೃತ್ ॥ ಶೋಚಯತೀತಿ ಶೂದ್ರಃ, ದುಷ್ಟಶ್ಚಾಸೌ ಶೂದ್ರಶ್ಚ ದುಷ್ಟಶೂದ್ರಃ, ತಮ್ ॥ ದ್ವಾಭ್ಯಾಂ ಜಾಯತ ಇತಿ ದ್ವಿಜಃ, ತಸ್ಯ ಸುತಃ ದ್ವಿಜಸುತಃ ತಂ ಗೋಪಾಯತೀತಿ ದ್ವಿಜಸುತಗುಪ್ ॥ ಕುಂಭೇ ಜಾಯತ ಇತಿ ಕುಂಭಜಃ ತಸ್ಮಾತ್ ॥ ಮಾಲಾಂ ಬಿಭರ್ತೀತಿ ಮಾಲಭಾರೀ ॥

**ಅಲಂಕಾರ:** ಹಿಂದಿನ ಶ್ಲೋಕಗಳಲ್ಲಿರುವ ಅಲಂಕಾರಗಳೇ ಇಲ್ಲಿಯೂ ಇರುತ್ತವೆ.

**ಯಜ್ಞಮಿತಿ ॥**

**ಯಜ್ಞಂ ತನ್ವಂಸ್ತ್ರಿಕೋಟೀನ್ ವ್ಯತುದತ ಭರತಾದ್ಯೋಽಸುರಾನೀಶವಾಕ್ಯಾ-**
**ದ್ಯಾಸ್ಯನ್ ಧಾಮಾತ್ರಿಪುತ್ರಂ ಭುಜಿಮಥ ಸ ನಯನ್ನಾತ್ಮಸೂನೂ ಸ್ವರಾಜ್ಯೇ ।**
**ಕೃತ್ವಾ ಶ್ರೀಹ್ರೀಹನೂಮದ್ಧೃತವಿಮಲಚಲಚ್ಚಾಮರಚ್ಛತ್ರಶೋಭೀ**
**ಬ್ರಹ್ಮಾದ್ಯೈಃ ಸ್ತೂಯಮಾನೋ ನಿಜಪುರವಿಲಸತ್ಪಾದಪದ್ಮೋಽವತಾನ್ಮಾಮ್ ॥ 11 ॥**

**ಅನ್ವಯಾರ್ಥ:** ಯಃ – ಯಾವ ರಾಮದೇವನು, ಯಜ್ಞಂ – ಅಶ್ವಮೇಧವೆಂಬ ಯಜ್ಞವನ್ನು, ತನ್ವನ್ – ಮಾಡಿದವನಾಗಿ, ತ್ರಿಕೋಟೀನ್ – ಮೂರುಕೋಟಿ ಸಂಖ್ಯಾಕರಾದ, ಅಸುರಾನ್ – ದೈತ್ಯರನ್ನು, ಭರತಾತ್ – ಭರತನಿಂದ, ವ್ಯತುದುತ – ಸಂಹಾರಮಾಡಿಸಿದನೋ, ಈಶವಾಕ್ಯಾತ್ – ರುದ್ರದೇವರ ವಚನಾನುಸಾರ, ಧಾಮ – ಶ್ವೇತದ್ವೀಪವನ್ನು ಕುರಿತು, ಯಾಸ್ಯನ್ – ಹೋಗತಕ್ಕವನಾಗಿ, ಅಥ – ಅನಂತರ, ಅತ್ರಿಪುತ್ರಂ – ಅತ್ರಿ – ಅತ್ರಿಋಷಿಯ ಮಕ್ಕಳಾದ ದೂರ್ವಾಸರಿಗೆ, ಭುಜಿಂ – ಭೋಜವನ್ನು, ನಯನ್ – ಮಾಡಿಸುವವನಾಗಿ, ಆತ್ಮಸೂನೂ – ಆತ್ಮ – ತನ್ನ, ಸೂನೂ – ಮಕ್ಕಳಾದ ಕುಶಲವರನ್ನು, ಸ್ವರಾಜ್ಯೇ – ನಿಜರಾಜ್ಯಪರಿಪಾಲನ ಕಾರ್ಯದಲ್ಲಿ, ಕೃತ್ವಾ – ನಿಯಮಿಸಿ ಶ್ರೀಹ್ರೀಹನೂಮ-ದ್ಧೃತವಿಮಲಚಲಚ್ಚಾಮರಚ್ಛತ್ರಶೋಭೀ – ಶ್ರೀ– ಶ್ರೀದೇವಿಯೂ, ಹ್ರೀ– ಹ್ರೀದೇವಿಯೂ, ಹನೂಮತ್– ಹನುಮಂತ-ದೇವರು ಇವರುಗಳಿಂದ, ಧೃತ– ಹಿಡಿಯಲ್ಪಟ್ಟ, ವಿಮಲ– ನಿರ್ಮಲಗಳಾದ, ಚಲಚ್ಚಾಮರ– ಲೋಲಂಬಮಾನವಾದ ಚಾಮರಗಳು, ಛತ್ರ– ಶ್ವೇತಚ್ಛತ್ರಿಯು ಇವುಗಳಿಂದ, ಶೋಭೀ– ಪ್ರಕಾಶಿಸತಕ್ಕ, ಬ್ರಹ್ಮಾದ್ಯೈಃ– ಚತುರ್ಮುಖ ಪ್ರಮುಖ ದೇವತೆಗಳಿಂದ, ಸ್ತೂಯಮಾನಃ– ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ, ನಿಜಪುರವಿಲಸತ್ಪಾದಪದ್ಮ: – ನಿಜ – ಸ್ವಕೀಯ-ವಾದ, ಪುರ – ಶ್ವೇತದ್ವೀಪದಲ್ಲಿ, ವಿಲಸತ್ – ಪ್ರಕಾಶಮಾನವಾದ, ಪಾದಪದ್ಮಃ – ಪಾದಕಮಲಗಳುಳ್ಳ, ಸಃ – ಅಂಥಾ ಶ್ರೀರಾಮದೇವರು, ಮಾಂ – ನನ್ನನ್ನು, ಅವತಾತ್ – ರಕ್ಷಣಮಾಡಲಿ ॥

**ಕಥಾಭಿಪ್ರಾಯ:** ಶ್ರೀರಾಮಚಂದ್ರಪ್ರಭುವು ಒಂದುಸಲ ಸುಗ್ರೀವಾದಿ ಕಪಿಶ್ರೇಷ್ಠರನ್ನೂ, ನಾನಾದೇಶಗಳಲ್ಲಿನ ರಾಜರುಗಳನ್ನೂ ಕರೆಯಿಸಿ ಸರ್ವಸಂಪತ್ತಿನಿಂದ ಕೂಡಿದ ಅಶ್ವಮೇಧಯಾಗವನ್ನು ಪ್ರಾರಂಭಿಸಿ ಒಂದು ವರ್ಷಕಾಲ ಯಾಗವನ್ನು ನೆರವೇರಿಸಿ ಸಕಲರನ್ನೂ ಸಂತೋಷಪಡಿಸಿದನು.

ಶೈಲೂಷರೆಂಬ ಗಂಧರ್ವಪುತ್ರರಾದ ಮೂರುಕೋಟಿ ಅಸುರರು ಲೋಕಕಂಟಕರಾಗಿರಲು ಅವರನ್ನು ಸಂಹರಿಸಬೇಕೆಂದು ಕೇಕೆಯ ದೇಶಾಧಿಪತಿಯು ಶ್ರೀರಾಮನಿಗೆ ಗಿರಿಸೇನ ಎಂಬುವವನ ಮೂಲಕ ಹೇಳಿಕಳಿಸಿ ವಿಜ್ಞಾಪಿಸಲು ಶ್ರೀರಾಮಚಂದ್ರನು ಭರತನನ್ನು ಗಂಧರ್ವನಗರಕ್ಕೆ ಕಳುಹಿಸಿ, ಆ ಮೂರು ಕೋಟಿ ದೈತ್ಯರನ್ನು ಭರತನಿಂದ ಸಂಹಾರಮಾಡಿಸಿ ಲೋಕಕಲ್ಯಾಣ ಮಾಡಿದನು.

ಶ್ರೀರಾಮಚಂದ್ರನು ರಾಜ್ಯಭಾರ ಮಾಡುತ್ತಿರುವಾಗ ಭೂಲೋಕವು ಬ್ರಹ್ಮಲೋಕದಂತೆ ರಾಜಿಸಹತ್ತಿತು. ಬ್ರಹ್ಮಲೋಕಾದಿಗಳನ್ನು ಯಾರೂ ಆಶಿಸದಂತಾಯಿತು. ಇದನ್ನು ಕಂಡು ಶ್ರೀ ರುದ್ರದೇವರು ಶ್ರೀರಾಮನಲ್ಲಿಗೆ ಬಂದು ''ಸ್ವಾಮಿ, ನೀನಿಲ್ಲಿ ರಾಜ್ಯಭಾರಮಾಡುತ್ತಿರುವುದರಿಂದ ಊರ್ಧ್ವ ಲೋಕಗಳನ್ನಾರೂ ಅಪೇಕ್ಷಿಸುವುದಿಲ್ಲ ; ಆದ್ದರಿಂದ ನೀನು ನಿನ್ನ ವರಮಂದಿರಕ್ಕೆ ಬಂದು ನಮ್ಮೆಲ್ಲರನ್ನೂ ಸಲಹಬೇಕು' ಎಂದು ಪ್ರಾರ್ಥಿಸಲು ಅವರಿಗೆ ಹಾಗೆಯೇ ಮಾಡುವುದಾಗಿ ಅಭಯವಚನವಿತ್ತು ಕಳುಹಿಸಿದನು. ಹೀಗಿರಲೊಂದುದಿನ ದೂರ್ವಾಸ ಋಷಿಗಳು ಬಂದು ಈಗಲೇ ನಿರ್ಮಿತವಾದ ಅನ್ನದಿಂದ ನನ್ನನ್ನು ತೃಪ್ತಿಪಡಿಸಬೇಕೆಂದು ಕೋರಿದರು. ಶ್ರೀರಾಮನು ಕೂಡಲೇ ತನ್ನ ಅಮೃತಮಯಕರದಿಂದ ಷಡ್ರಸೋಪೇತವಾದ ಚತುರ್ವಿಧ ಅನ್ನಗಳನ್ನು ಸೃಷ್ಟಿಸಿ ಅವರಿಗೆ ಉಣಬಡಿಸಿ, ಅವರಿಂದ ಸ್ತುತ್ಯನಾಗಿ, ದೂರ್ವಾಸರನ್ನು ಕಳುಹಿಸಿಕೊಟ್ಟನು.

ಆ ತರುವಾಯ ಸೀತಾದೇವಿಯಲ್ಲಿ ತನ್ನಿಂದ ಉತ್ಪನ್ನರಾದ ಇಂದ್ರ - ಹುತಾಶನಾಂಶ ಸಂಭೂತರಾದ ಕುಶಲವರೆಂಬ ಪುತ್ರರಿಗೆ ಸಾಮ್ರಾಜ್ಯ - ಯೌವರಾಜ್ಯಭಿಷೇಕಮಾಡಿ ಶ್ರೀರಾಮಚಂದ್ರನು ಅಯೋಧ್ಯೆಯಿಂದ ಉತ್ತರದಿಕ್ಕಿಗೆ ಪ್ರಯಾಣಬೆಳೆಸಿ ಶ್ವೇತದ್ವೀಪಕ್ಕೆ ಬಂದು, ಅಲ್ಲಿ ಶ್ರೀ, ಹ್ರೀಗಳೆಂಬ ರೂಪವನ್ನು ಧರಿಸಿದ ಸೀತೆಯು ಎರಡು ಪಾರ್ಶ್ವಗಳಲ್ಲಿಯೂ ನಿಂತು ಚಾಮರ ಬೀಸುತ್ತಿರಲು, ಶ್ರೀ ಹನುಮಂತದೇವರು ಶ್ವೇತಚ್ಛತ್ರವನ್ನು ಹಿಡಿದಿರಲು ಬ್ರಹ್ಮರುದ್ರಾದಿದೇವತೆಗಳಿಂದ ಸ್ತುತ್ಯನಾಗಿ ಸೀತಾದೇವಿಯೊಡನೆ ಸುಖದಿಂದ ವಾಸಮಾಡಿದನು - ಇತ್ಯಾದಿ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

ಇಂಥ ಶ್ರೀರಾಮಚಂದ್ರಪ್ರಭುವು ನಮ್ಮನ್ನು ರಕ್ಷಿಸಲಿ ಎಂದು ಶ್ರೀಗುರುಸಾರ್ವಭೌಮರು ಹನ್ನೊಂದು ಪದ್ಯಗಳಲ್ಲಿ ಸಂಗ್ರಹ ರಾಮಾಯಣದಲ್ಲಿ ಉಕ್ತವಾದ ಶ್ರೀರಾಮಕಥೆಯನ್ನು ನಿರೂಪಿಸಿ ಮಂಗಳಮಾಡಿದ್ದಾರೆ.

**ವಿಗ್ರಹ:** ಇಜ್ಯತೇ ಅಸ್ಮಿನ್ನಿತಿ ಯಜ್ಞಃ ತಮ್ ॥ ತಿಸ್ರಃ ಕೋಟಯಃ ಏಷಾಂ ತೇ ತ್ರಿಕೋಟಿಯಃ, ತಾನ್ ॥ ಅಸ್ಯಂತೀತಿ (ದೇವಾನ್) ಅಸುರಾಃ, ತಾನ್ ॥ ಈಶಸ್ಯ ವಾಕ್ಯಂ ಈಶವಾಕ್ಯಂ, ತಸ್ಮಾತ್ ॥ ಅತ್ತೀತಿ ಅತ್ರಿಃ, ಪುತಃ ತ್ರಾಯತ ಇತಿ ಪುತ್ರಃ, ಅತ್ರೇಃ ಪುತ್ರಃ ಅತ್ರಿಪುತ್ರಃ, ತಮ್ ॥ ಸೂಯತ ಇತಿ ಸೂನುಃ, ಸೂನುಶ್ಚ ಸೂನುಶ್ಚ ಸೂನೂ, ಆತ್ಮನಃ ಸೂನೂ ಆತ್ಮಸೂನೂ ॥ ಸ್ವಸ್ಯ ರಾಜ್ಯಂ ಸ್ವರಾಜ್ಯಂ, ತಸ್ಮಿನ್ ॥ ಶ್ರಯತೀತಿ ಶ್ರೀಃ, ಶ್ರೀಶ್ಚ ಹ್ರೀಶ್ಚ ಹನುಮಾಂಶ್ಚ ಶ್ರೀಹ್ರೀಹನೂಮಂತಃ, ತೈಃಧೃತಾನಿ ಶ್ರೀಹ್ರೀಹನೂಮದ್ಧತಾನಿ, ಚಲತೀ ಚ ತೇ ಚಾಮರೇ ಚ ಚಲಚ್ಚಾಮರೇ ಚಲಚ್ಚಾಮರೇ ಚ ಛತ್ರಂ ಚ ಚಲಚ್ಚಾಮರಛತ್ರಾಣಿ, ವಿಮಲಾನಿ ಚ ತಾನಿ ಚಲಚ್ಚಾಮರಛತ್ರಾಣಿ ಚ ವಿಮಲಚಲಚ್ಚಾಮರಚ್ಛತ್ರಾಣಿ, ಶ್ರೀ ಹ್ರೀ ಹನೂಮದ್ವತಾನಿ ಚ ತಾನಿ ವಿಮಲಚಲಚ್ಚಾಮರಚ್ಛತ್ರಾಣಿ ಚ ಶ್ರೀಹ್ರೀಹನೂಮದ್ಧೃತ ವಿಮಲಚಲಚ್ಚಾಮರಚ್ಛತ್ರಾಣಿ, ತೈಃ, ಶೋಭತ ಇತಿ ಶ್ರೀಹ್ರೀ-

ಹನೂಮದ್ಧೃತ ವಿಮಲಚಲಚ್ಚಾಮರಚ್ಛತ್ರಶೋಭೀ ॥ ಬ್ರಹ್ಮಾ ಆದ್ಯೋ ಏಷಾಂ ತೇ ಬ್ರಹ್ಮಾದ್ಯಾಃ, ತೈಃ ॥ ನಿಜಂ ಚ ತತ್ ಪುರಂ ಚ ನಿಜಪುರಂ, ನಿಜಪುರೇ ವಿಲಸತೀ ನಿಜಪುರವಿಲಸತೀ, ಪಾದೌ ಪದ್ಮೇ ಇವ ಪಾದಪದ್ಮೇ, ನಿಜಪುರವಿಲಸತೀ ಪಾದಪದ್ಮೇ ಯಸ್ಯ ಸಃ ನಿಜಪುರವಿಲಸತ್ಪಾದಪದ್ಮಃ ॥

**ಅಲಂಕಾರ:** ಇಲ್ಲಿಯೂ ಹಿಂದಿನ ಶ್ಲೋಕಗಳಲ್ಲಿನ ಅಲಂಕಾರಗಳು ॥ 11 ॥

ಹೀಗೆ ಶ್ರೀಮದ್ರಾಘವೇಂದ್ರಗುರುವರೇಣ್ಯರು ಗ್ರಂಥವನ್ನು ಸಂಪೂರ್ಣ ಮಾಡಿ ತಾವು ರಚಿಸಿದ ಗ್ರಂಥಕ್ಕೆ ಹೆಸರಿಡುತ್ತಾ ಆ ಗ್ರಂಥವು ಎಲ್ಲರಿಂದಲೂ ಅತ್ಯುಪಾದೇಯವೆಂಬುದನ್ನು ತಿಳಿಸಲು ರಚಯಿತರಾದ ತಮ್ಮ ನಾಮವನ್ನು ನಿರ್ದೇಶನ ಮಾಡುತ್ತಾ ತಮ್ಮ (ಶ್ರೀ ಗುರುರಾಜರ) ವಂಶೀಯರು, ತಮ್ಮ ಮಠೀಯರು ಮತ್ತು ಜಗತ್ತಿನಲ್ಲೆಲ್ಲಾ ವಾಸಿಸುವ ತಮ್ಮ ಶಿಷ್ಯ ಭಕ್ತಜನರುಗಳಿಗೆ ಈ ಸ್ತೋತ್ರ ಪಠನದಿಂದ ಬರುವ ಫಲವನ್ನು ಹೀಗೆ ಆಶಂಸನ ಮಾಡುತ್ತಾರೆ – '**ಇತೀತಿ**' ॥

**ಇತಿ ಶ್ರೀರಾಮಚಾರಿತ್ರಮಂಜರೀ ಲೇಶತಃ ಕೃತಾ ।**
**ರಾಘವೇಂದ್ರೇಣ ಯತಿನಾ ಭೂಯಾದ್ರಾಮಪ್ರಸಾದದಾ ॥ 12 ॥**

**ಅರ್ಥ:** ಇತಿ – ಪೂರ್ವೋಕ್ತಪ್ರಕಾರವಾಗಿ, ರಾಘವೇಂದ್ರೇಣ ಯತಿನಾ – ಶ್ರೀರಾಘವೇಂದ್ರತೀರ್ಥ ಶ್ರೀಪಾದಂಗಳವರಿಂದ, ಲೇಶತಃ – ಸಂಕ್ಷೇಪವಾಗಿ, ಕೃತಾ – ಮಾಡಲ್ಪಟ್ಟ ಶ್ರೀರಾಮಚಾರಿತ್ರಮಂಜರೀ – ಶ್ರೀರಾಮಚಂದ್ರನ ಚರಿತ್ರೆಗಳ ಮಂಜರಿಯಂತಿರುವ ಮಂಜರಿಯನ್ನು ಪ್ರತಿಪಾದನಮಾಡುವ ಈ ಗ್ರಂಥವು, ರಾಮಪ್ರಸಾದದಾ – ರಾಮ-ಶ್ರೀಮೂಲರಾಮದೇವರ, ಪ್ರಸಾದದಾ – ಅನುಗ್ರಹವನ್ನು ಕೊಡಿಸತಕ್ಕದ್ದಾಗಿ, ಭೂಯಾತ್ – ಆಗಲಿ ॥

**ತಾತ್ಪರ್ಯ:** ಈ ಗ್ರಂಥವನ್ನು ಪಠನ, ಪಾಠನ ಮಾಡತಕ್ಕ ಜನರುಗಳಿಗೆ ಶ್ರೀಮೂಲರಾಮಚಂದ್ರದೇವನು ಪ್ರಸನ್ನನಾಗಿ ಸಕಲ ಪುಮರ್ಥಗಳನ್ನೂ ಅನುಗ್ರಹಿಸುತ್ತಾನೆ ॥

**ವಿಗ್ರಹ:** ಚರಿತ್ರಾಣ್ಯೇವ ಚಾರಿತ್ರಾಣಿ, ರಾಮಸ್ಯ ಚಾರಿತ್ರಾಣಿ ರಾಮಚಾರಿತ್ರಾಣಿ, ರಾಮಚಾರಿತ್ರಾಣಾಂ ಮಂಜರೀವ ಮಂಜರೀ ರಾಮಚಾರಿತ್ರಮಂಜರೀ ॥ ರಾಮಸ್ಯ ಪ್ರಸಾದಃ ರಾಮಪ್ರಸಾದಃ ತಂ ದದಾತೀತಿ ರಾಮಪ್ರಸಾದದಾ ॥ 12 ॥

ಈಗ ಶ್ರೀ ಗುರುಸಾರ್ವಭೌಮರವರ ಪೂರ್ವಾಶ್ರಮಪುತ್ರರಾದ ವಿದ್ವಚ್ಚಕ್ರಚೂಡಾಮಣಿಗಳಾದ ಕವಿಸಾರ್ವಭೌಮರಾದ ಮಹಾನುಭಾವರಾದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರವರು "ಶ್ರೀರಾಮಚಾರಿತ್ರಮಂಜರೀಮಾಲಾ" ಎಂಬ ತಮ್ಮ ವ್ಯಾಖ್ಯಾನ ಪರಿಸಮಾಪ್ತಿಕಾಲದಲ್ಲಿ ಗ್ರಂಥಪ್ರತಿಪಾದ್ಯದೇವತೆಯ ವಂದನರೂಪವಾದ ಮಂಗಳವನ್ನು ಮಾಡುತ್ತಾರೆ. "ಯತ್ಪ್ರಸಾದಾತ್" ಎಂದು.

**ಯತ್ಪ್ರಸಾದಾತ್ಸಂಪದಃ ಸ್ಯುರ್ಬ್ರಹ್ಮಾದೀನಾಂ ಶ್ರಿಯೋಽಪಿ ಚ ।**
**ತಸ್ಮೈ ನಮೋ ಭಗವತೇ ಜಾನಕೀಜಾನಯೇ ಸದಾ ॥**

**ತಾತ್ಪರ್ಯ:** ಯಾವ ಪರಮಾತ್ಮನ ಅನುಗ್ರಹದಿಂದ ಬ್ರಹ್ಮಾದಿ ದೇವತೆಗಳಿಗೆ, ಶ್ರೀ ಲಕ್ಷ್ಮೀದೇವಿಯರಿಗೂ ಕೂಡ ಸಂಪತ್ತುಗಳುಂಟಾಗುವವೋ ಅಂಥಾ ಷಡ್ಗುಣೈಶ್ವರ್ಯಸಂಪನ್ನರಾದ ಶ್ರೀಜಾನಕೀಜಾನಿಯಾದ ಶ್ರೀಮೂಲರಾಮಚಂದ್ರನಿಗೆ ಸರ್ವದಾ ನಮಸ್ಕಾರಗಳು.

ಶ್ರೀ ಲಕ್ಷ್ಮೀನಾರಾಯಣಚಾರ್ಯರು ತಮ್ಮ ವ್ಯಾಖ್ಯಾನಗ್ರಂಥದ ನಾಮನಿರ್ದೇಶನಮಾಡುತ್ತಾ ವ್ಯಾಖ್ಯಾನಕ್ಕೆ ಆತ್ಯುಪಾದೇಯತ್ವ ಪ್ರಾಪ್ತಿಗಾಗಿ ಗ್ರಂಥಕರ್ತೃಗಳಾದ ತಮ್ಮ ನಾಮನಿರ್ದೇಸನಮಾಡುತ್ತಾ ಗುರುಭಕ್ತಿಯನ್ನು ಸೂಚಿಸುತ್ತಾ ಶ್ರೀ ಮೂಲರಾಮದೇವರು ಈ ಗ್ರಂಥದ ರಚನೆಯಿಂದ ಪ್ರೀತರಾಗಲೆಂದು ''ಲಕ್ಷ್ಮೀನಾರಾಯಣಾಖ್ಯೇನ'' ಎಂಬ ಸಮಾಪ್ತಿ ಮಂಗಳಶ್ಲೋಕದಿಂದ ಪ್ರಾರ್ಥಿಸುತ್ತಾ ಉಪಸಂಹರಿಸುತ್ತಾರೆ.

**ಶ್ರೀ ಲಕ್ಷ್ಮೀನಾರಾಯಣಾಖ್ಯೇನ ಗುರುಪಾದಪ್ರಸಾದತಃ ।**
**ಕೃತೇಯಂ ಮಂಜರೀಮಾಲಾ ರಾಮಃ ಪ್ರೀಣಾತು ಮೇ ತಯಾ ॥**

**ತಾತ್ಪರ್ಯ:** ಶ್ರೀ ಲಕ್ಷ್ಮೀನಾರಾಯಣಾಚಾರ್ಯನೆಂಬ ಹೆಸರುಳ್ಳ ನಾನು ಶ್ರೀ ಗುರುಸಾರ್ವಭೌಮರವರ ಪಾದಾ-ನುಗ್ರಹದಿಂದ ರಚಿಸಿದ ''ರಾಮಚಾರಿತ್ರಮಂಜರೀಮಾಲಾ'' ಎಂಬ ಈ ವ್ಯಾಖ್ಯಾನದಿಂದ ಶ್ರೀಮೂಲರಾಮಚಂದ್ರ-ದೇವರು ಪ್ರೀತರಾಗಲಿ ॥

ಈಗ ಅನುವಾದಕಾರರು ಅನುವಾದದ ಮಂಗಳವನ್ನು ಮಾಡುತ್ತಾರೆ.

ಪರಿಮಳಾಭಿಧಗುರುವರರಸುತ
ಸಿರಿಲಕುಮಿನಾರಾಯಣಾರ್ಯರ
ವರಕೃತಿಯನನುಸರಿಸಿ ರಚಿಸಿದೆನವರ ಕೃಪೆಗಾಗಿ ।
ಪರಮಭಕುತಿಯೊಳಿದನು ಪಠಿಪೆಗೆ
ಪರಿಪರಿಯ ವಾಂಛಿತವ ಕರುಣಿಸಿ
ಪೊರೆಯಲೆಂದರ್ಥಿಪೆನು ವರಕಮಲೇಶನನವರತ ॥

*ಇತಿ ಶ್ರೀಲಕ್ಷ್ಮೀನಾರಾಯಣಾಚಾರ್ಯವಿರಚಿತ ''ಶ್ರೀರಾಮಚಾರಿತ್ರಮಂಜರೀಮಾಲಾನುಸಾರಿ''*
*ರಾಜಾ ಶ್ರೀ ಗುರುರಾಜಾಚಾರ್ಯಕೃತ ಕರ್ಣಾಟಕಭಾಷಾವ್ಯಾಖ್ಯಾನವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★